# ಎಫ್.ಎಂ.ಸೂಫಿ
# F.M. SOOPHIE

ಪಿ. ಆರ್. ತಿಪ್ಪೇಸ್ವಾಮಿ




ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು

F.M. SOOPHIE: A bilingual Biography (Kannada & English) by P.R. Thippeswamy, translated by Dr. H.A. Parshwanath.
Published by Indiramma H.V., Registrar, Karnataka Lalithakala Academy, Kannada Bhavana, J.C. Road, Bangalore-560 002

First impression: 1997
Second impression: 2018

Price: 65
Pages: 48 + 8
Copies: 1000
Paper Used : 80GSM Maplitho





ಪ್ರಕಾಶಕರು:
ಇಂದ್ರಮ್ಮ.ಹೆಚ್.ವಿ
ರಿಜಿಸ್ಟಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ

ಮುದ್ರಕರು:
ರಶ್ಮಿ ಪ್ರಿಂಟರ್ಸ್
ಸುಧಾಮನಗರ, ಬೆಂಗಳೂರು
ದೂ. : 080 – 41203465
ಮೊ. : 9901916581

# ಅಧ್ಯಕ್ಷರ ನುಡಿ

ಇಪ್ಪತ್ತು ವರ್ಷಗಳ ನಂತರ ಖ್ಯಾತ ಕಲಾವಿದ ಮೈಸೂರಿನ ಎಫ್.ಎಂ. ಸೂಫಿಯವರನ್ನು ಕುರಿತ ಈ ದ್ವಿಭಾಷೀಯ ಮೊನೊಗ್ರಾಫ್ ಪುಸ್ತಕವು ಪುನರ್-ಮುದ್ರಣಗೊಳ್ಳುತ್ತಿದೆ. ಈ ಪುಸ್ತಕದ ಕಲಾವಿದರು ಹಾಗೂ ಲೇಖಕರು ಇಬ್ಬರೂ ಈಗ ನಮ್ಮೊಡನಿಲ್ಲ. ಆದ್ದರಿಂದ ಸಹಜವಾಗಿ ಈ ಪುಸ್ತಕದ ಮರುಮುದ್ರಣವು ಇನ್ನೂ ಹೆಚ್ಚಿನ ಮೌಲ್ಯವನ್ನು ಪಡೆದುಕೊಳ್ಳುತ್ತದೆ. ಬಹುವಾಗಿ ಸೂಫಿಯವರ ಅಸಲಿ ಕಲಾಕೃತಿಗಳ ಒಂದು ನಿರ್ದಿಷ್ಟವಾದ ಏಕವ್ಯಕ್ತಿ ಸಂಗ್ರಹಾಲಯವೆಂಬುದು ಎಲ್ಲಿಯೂ ಇಲ್ಲ. ಆದ್ದರಿಂದ ಈ ಪುಸ್ತಕವೇ ಆ ಜವಾಬ್ದಾರಿಯನ್ನು ಸ್ವಲ್ಪಮಟ್ಟಿಗೆ ಹೊರುವುದು ಈಗ ಅನಿವಾರ್ಯವಾಗಿದೆ.

ಹದಿನೆಂಟನೇ ಶತಮಾನದ ಜಾರ್ಜ್ ಸ್ಟಬ್ಸ್ ಎಂಬ ಬ್ರಿಟಿಷ್ ಕಲಾವಿದ ಕುದುರೆಗಳನ್ನೇ ಹೆಚ್ಚಾಗಿ ಚಿತ್ರಿಸಿರುತ್ತಾನೆ. ಬ್ರಿಟಿಷ್ ರಾಜ್ಯಾಡಳಿತಕ್ಕೆ ಒಳಗಾಗಿದ್ದ ಮೈಸೂರಿನಲ್ಲಿ ತಮ್ಮ ಕ್ರಿಯಾಶೀಲತೆಯನ್ನು ಮೆರೆದ ಸೂಫಿಯವರ ಪ್ರತಿಭೆಯನ್ನು ನೆನೆದವರಿಗೆ ಸ್ಟಬ್ಸ್‌ನಂತೆ ಇವರ ಪ್ರಾಣಿಚಿತ್ರಗಳನ್ನು ಸ್ಮರಿಸುವುದು ಅನಿವಾರ್ಯ. ಮುಖ್ಯ ವ್ಯತ್ಯಾಸವೆಂದರೆ, ಸ್ಟಬ್ಸ್‌ನ ಕುದುರೆಗಳು ವಸಾಹತೀಕರಣದ ಸಂಕೇತವಾದರೆ, ಸೂಫಿಯವರ ಪ್ರಾಣಿಗಳು, ಪ್ರಾಣಿಗಳ ಮ್ಯೂಸಿಯಂ ವಾತಾವರಣವನ್ನು ನಿರೂಪಿಸುವಂತಹವು. ವಸಾಹತೀಕರಣಕ್ಕೆ ಒಳಗಾದಂತಹವು. ಪಂಚತಂತ್ರದ ಕಥೆಗಳಲ್ಲಿ, ಮನುಷ್ಯರ ಸ್ವಭಾವಗಳನ್ನು ಪ್ರಾಣಿಗಳ ಮೂಲಕ ಯಾರಿಗೂ ಬೇಸರವಾಗದಂತೆ ತಿಳಿಹೇಳುವುದು ವಿಧಿತ. ಈಗ ಅದು ವಾಲ್ಟ್ ಡಿಸ್ನಿ, ಅನಿಮೇಷನ್ ಮುಂತಾದ ಸಮಕಾಲೀನ ತಂತ್ರಜ್ಞಾನಕ್ಕೂ ಅನಿವಾರ್ಯವಾದ ದೃಶ್ಯಾವಳಿಗಳಾಗಿವೆ. ಕಲಾವಿದ ಸೂಫಿಯವರು ಈ ನಿಟ್ಟಿನಲ್ಲಿ ಭವಿಷ್ಯದಲ್ಲಾದರೂ ನಮಗೆ ಹಲವು ಸಾಂಸ್ಕೃತಿಕ ಆಯಾಮಗಳಲ್ಲಿ ಒದಗಿಬರುವಂತ ಅರ್ಥಪೂರ್ಣ ಕಲಾಕೃತಿಗಳನ್ನು ರಚಿಸಿದ್ದಾರೆ. ಇದೊಂದು ಕರ್ನಾಟಕದ ಹೆಮ್ಮೆಯ ಸಂಗತಿ. ಮೈಸೂರಿನ ರಾಜ್ಯಾಡಳಿತ ಹಾಗೂ ಪ್ರಜಾಪ್ರಭುತ್ವದ ಆಳ್ವಿಕೆಗಳ ನಡುವಿನ ರಾಜಕೀಯ-ಸಾಂಸ್ಕೃತಿಕ ಪಲ್ಲಟಗಳ ಕಾಲದಲ್ಲಿ ಬದುಕಿ, ಅದರ ಸಾರವನ್ನು ದೃಶ್ಯವನ್ನಾಗಿಯೂ ಸೆರೆಹಿಡಿದ ಸೂಫಿಯವರು ಸ್ವತಃ ಕಲಾಶಿಕ್ಷಕರಾಗಿದ್ದವರು.

ಕರ್ನಾಟಕ ಚಿತ್ರಕಲಾ ಪರಿಷತ್ತು ಹಾಗೂ ಮೈಸೂರಿನ ಆರ್ಟ್ಸ್ ಅಂಡ್ ಇಂಡಸ್ಟ್ರೀಸ್ ಮಾಲೀಕರಾದ ಶ್ರೀ ಮೂರಾರಿ ವಿ. ಅವರು ಸಂಗ್ರಹಿಸಿದ ಕೃತಿಗಳು ಸಂಗ್ರಹಿತವಾಗಿವೆ. ಮತ್ತೊಬ್ಬ ಹಿರಿಯ ಕಲಾವಿದರಾದ, ಈ ಸಲದ ರಾಜ್ಯೋತ್ಸವ ಪ್ರಶಸ್ತಿಗೆ ಭಾಜನರಾದ ಜಿ.ಎಲ್.ಎನ್. ಸಿಂಹರವರು ಸ್ವತಃ ಸೂಫಿಯವರ ಬಳಿ ಕಲೆಯನ್ನು ಕಲಿತವರಾಗಿದ್ದಾರೆ. ಈ ಪುಸ್ತಕವನ್ನು ಬರೆದಿರುವ ಶ್ರೀ ಪಿ.ಆರ್. ತಿಪ್ಪೇಸ್ವಾಮಿಯವರು ಸ್ವತಃ ಕಲಾವಿದರೂ ಆಗಿದ್ದುದ್ದರಿಂದ, ಇದನ್ನು ಓದುವಾಗ ಸ್ವತಃ ಕಲಾವಿದರ ಬದುಕಿನೊಂದಿಗೆ ಹತ್ತಿರದಿಂದ ಸಂಕ್ಷಿಪ್ತವಾಗಿ ಆದರೆ ನಿಕಟವಾಗಿ ಒಡನಾಡಿದಂತಾಗುತ್ತದೆ. ಓದುಗರು ಈ ಪುಸ್ತಕದ ಸ್ವಾಧವನ್ನು ಹೆಚ್ಚು ಅನುಭವಿಸುವಂತಾಗಲಿ ಎಂಬ ಹಾರೈಕೆಯೊಂದಿಗೆ,

ಶ್ರೀ ಎಫ್.ಎಂ.ಸೂಫಿ ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಸದರಿ ಪುಸ್ತಕವನ್ನು ಮರುಮುದ್ರಣ ಮಾಡಲಾಗುತ್ತಿದೆ. ಈ ಮರು ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಕಾರ್ಯ ಸಮಿತಿ ಸದಸ್ಯರಿಗೂ, ಪುಸ್ತಕದ ಸಂಪದಾಕರಿಗೂ, ಪ್ರಕಟಣಾ ಸಲಹಾ ಸಮಿತಿ ಸದಸ್ಯರಿಗೂ, ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ.ಹೆಚ್.ವಿ ಅವರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ ಮತ್ತು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮಾಲೀಕರು, ರಶ್ಮಿ ಪ್ರಿಂಟರ್ಸ್, ಬೆಂಗಳೂರು ಇವರಿಗೂ ಅಕಾಡೆಮಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರೊ. ಎಂ.ಜೆ. ಕಮಲಾಕ್ಷಿ
ಅಧ್ಯಕ್ಷರು
ಹಾಗೂ ಗೌರವ ಸಂಪಾದಕರು

## ಅಧ್ಯಕ್ಷರ ನುಡಿ

ನಮ್ಮ ಲಲಿತಕಲಾ ಅಕಾಡೆಮಿಯು ಕಳೆದ ೩೦ ವರ್ಷಗಳಿಂದ ಅನೇಕ ಪ್ರಕಟಣೆಗಳ ಮೂಲಕ ಕರ್ನಾಟಕದ ಕಲಾಪರಂಪರೆಯನ್ನು ಕಲಾವಿದರಿಗೆ ಹಾಗೂ ಹೃದಯವಂತರಿಗೆ ಪರಿಚಯ ಮಾಡುತ್ತಾ ಬಂದಿದ್ದು, "ಕಲಾವಿದರ ಮಾಲೆ" ಮೂಲಕ ಅನೇಕ ಹಿರಿಯ ಕಲಾವಿದರ ವ್ಯಕ್ತಿ ಪರಿಚಯ, ಸಾಧನೆಗಳನ್ನು ಪರಿಚಯಿಸಲಾಗಿದೆ. ಈ ಕಲಾಕೃತಿಗಳು ಭಾರತದ ಅನೇಕ ಅಕಾಡೆಮಿಗಳ, ಸಾಂಸ್ಕೃತಿಕ ಕೇಂದ್ರಗಳ, ವಿಶ್ವವಿದ್ಯಾಲಯಗಳ ಕಾಲ ಕೇಂದ್ರಗಳ ಸಂಗ್ರಹದಲ್ಲಿದ್ದು, ಸಂಶೋಧಕರಿಗೆ ಪ್ರೇರಣೆಯಾಗಿವೆ. ಅವುಗಳ ಬೇಡಿಕೆ ಸಹ ದಿನೇ ದಿನೇ ಹೆಚ್ಚುತ್ತಿದ್ದು ಬಹಳಷ್ಟು ರೀತಿಯ ಪ್ರಸಂಶನೀಯದಾಯಕ ವಾತಾವರಣ ಮೂಡಿಸಿವೆ.

ನಾಡಿನ ಕಲಾಪರಂಪರೆಗೆ ಮೈಸೂರಿನ ಕಲಾವಿದರಾದ ದಿವಂಗತ ಎಫ್.ಎಂ. ಸೂಫಿ ಅವರು ತಮ್ಮ ಬದುಕನ್ನೇ ಕಲೆಗಾಗಿ ತೊಡಗಿಸಿಕೊಂಡಿದ್ದವರು. ಈಗ ಬಿಡುಗಡೆಯಾಗುತ್ತಿರುವ ಪುಸ್ತಕವನ್ನು ಶ್ರೀ ಪಿ. ಆರ್. ತಿಪ್ಪೇಸ್ವಾಮಿಯವರು ದಿವಂಗತ ಎಫ್.ಎಂ. ಸೂಫಿಯವರನ್ನು ಅರಿತಿರುವ ಬರಹಗಾರರು. ಕಲೆ-ಕಲಾವಿದರ ಬಗ್ಗೆ ಅರಿತವರಾಗಿದ್ದು, ಅವರ ಬದುಕನ್ನು, ಕಲಾಸಂಪತ್ತನ್ನು ಕುರಿತಂತೆ ಅವರ ಚಿತ್ರಗಳನ್ನು ಅರಿಯಲು ಪ್ರಬುದ್ಧವಾದ ಪರಿಚಯ ನೀಡಿದ್ದಾರೆ.

ಕಲಾವಿದರು, ಕಲಾರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಕಾರ್ಯ ವ್ಯಾಪ್ತಿಯನ್ನು, ಸಾಧನೆಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

**ಪ್ರೊ. ಅಂದಾನಿ ವಿ.ಜಿ.**
**ಅಧ್ಯಕ್ಷರು**

# ಪ್ರಕಾಶಕರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ನಾಡಿನ ಕಲಾಪರಂಪರೆಗೆ ತನ್ನದೇ ಆದ ಕೊಡುಗೆ ನೀಡಿದ ಪ್ರಮುಖರಲ್ಲಿ ದಿ. ಶ್ರೀ ಎಫ್.ಎಂ.ಸೂಫಿ ಅವರು ಒಬ್ಬರು. ಶ್ರೀಯುತರು ೧೯೧೬ರಲ್ಲಿ ಜನಿಸಿ ೧೯೮೮ರಲ್ಲಿ ಇಹಲೋಕ ತ್ಯಜಿಸಿದರು. ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೯೮ರಲ್ಲಿ ಫಕೀರ್ ಮಹಮ್ಮದ್ ಸೂಫಿ ಅವರ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಒಳಗೊಂಡ ಶ್ರೀ ಪಿ.ಆರ್.ತಿಪ್ಪೇಸ್ವಾಮಿ ಅವರು ಬರೆದಿರುವ ಪುಸ್ತಕವನ್ನು ಹೊರತರಲಾಗಿತ್ತು. ಶ್ರೀ ಎಫ್.ಎಂ.ಸೂಫಿ ಅವರಿಗೆ ನೂರು ವಸಂತಗಳು ತುಂಬಿದ ಸಂದರ್ಭದಲ್ಲಿ ಪುಸ್ತಕವನ್ನು ಮರು ಮುದ್ರಣ ಮಾಡಲಾಗುತ್ತಿದೆ.

ದಿ. ಶ್ರೀ ಎಫ್.ಎಂ.ಸೂಫಿ ಅವರು ನಾಡಿನ ಕಲಾಪರಂಪರೆಗೆ ತಮ್ಮ ಬದುಕನ್ನೇ ತೊಡಗಿಸಿಕೊಂಡವರು. ಇವರು ಕಲಾಕ್ಷೇತ್ರದಲ್ಲಿ ಧ್ರುವತಾರೆಯಂತೆ ಮೆರೆದ ಇವರ ಚಿತ್ರಣದ ಪಕ್ಷಿನೋಟ ಕುತೂಹಲಕಾರಿಯಾದುದು. ಯುವ ಪೀಳಿಗೆಗೆ ಆದರ್ಶ ಪ್ರಾಯವಾದುದು. ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಧ್ಯಾಪಕರಾಗಿದ್ದಾಗ ಸಹೋದ್ಯೋಗಿಗಳಿಗೆ ಅವರ ಶಿಷ್ಯರಿಗೆ ಕಲಾ ಪ್ರೋತ್ಸಾಹ ನೀಡುತ್ತಿದ್ದರು. ಕಷ್ಟಪಟ್ಟು ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಬಹಳವಾಗಿ ಹುರಿದುಂಬಿಸುತ್ತಿದ್ದರು. ನಿಜವಾದ ಕಲಿಕೆಗೆ ಪ್ರಾಮುಖ್ಯತೆ ಕೊಡುತ್ತಿದ್ದರೇ ವಿನಹಃ ಅದರಿಂದ ಬರುವ ಗಳಿಕೆಗೆ ಅಲ್ಲ. ಇಂತಹ ಮಹಾನ್ ಕಲಾವಿದರ ಜನ್ಮಶತಮಾನೋತ್ಸವ ಆಚರಿಸುತ್ತಿರುವುದು ಅಕಾಡೆಮಿಗೆ ಹೆಮ್ಮೆಯ ವಿಷಯವಾಗಿದೆ. ಇವರ ಕಲಾಕೃತಿಗಳು ನಾಡಿನೆಲ್ಲಡೆ ಇಂದಿಗೂ ನಮ್ಮನ್ನು ಆಕರ್ಷಿತವಾಗುವಂತೆ ಮಾಡಿವೆ.

ಶ್ರೀ ಎಫ್.ಎಂ.ಸೂಫಿ ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಸದರಿ ಪುಸ್ತಕವನ್ನು ಮರುಮುದ್ರಣ ಮಾಡಲಾಗುತ್ತಿದೆ. ಈ ಮರು ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಅಧ್ಯಕ್ಷರಾದ ಆದ ಪ್ರೊ.ಎಂ.ಜೆ.ಕಮಲಾಕ್ಷಿ ಅವರಿಗೂ, ಅಕಾಡೆಮಿಯ ಕಾರ್ಯ ಸಮಿತಿ ಸದಸ್ಯರಿಗೂ, ಪುಸ್ತಕದ ಸಂಪಾದಕರಿಗೂ, ಪ್ರಕಟಣಾ ಸಲಹಾ ಸಮಿತಿ ಸದಸ್ಯರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ ಮತ್ತು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮಾಲೀಕರು, ರಶ್ಮಿ ಪ್ರಿಂಟರ್ಸ್, ಬೆಂಗಳೂರು ಇವರಿಗೂ ಅಕಾಡೆಮಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಇಂದ್ರಮ್ಮ ಹೆಚ್.ವಿ**
ರಿಜಿಸ್ಟ್ರಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ

# ಎಫ್.ಎಂ.ಸೂಫಿ

ಜನಾಬ್ ಫಕೀರ್ ಮಹಮದ್ ಸೂಫಿ ಅವರು ಮೃಗ ಪಕ್ಷಿಗಳ ರಚನೆಯಲ್ಲಿ ಸಿದ್ಧಹಸ್ತರೆನಿಸಿದ್ದ ಚಿತ್ರಕಾರರಾಗಿದ್ದರು. ಎಸ್.ಎಂ. ಸೂಫಿ ಎಂದೇ ಕಲಾಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದರು. 'ಶಿವ ಕೊಡಬೇಕು ನಾವು ಅನುಭವಿಸಬೇಕು' ಎನ್ನುವ ರೀತಿ ಬದುಕುತ್ತಿದ್ದ ಅವರು ಪ್ರಾತಃಕಾಲದಿಂದ ಸಂಜೆಯವರೆಗೆ ಪ್ರಕೃತಿ ದೇವಿಯ ಪ್ರಫುಲ್ಲ ದೃಶ್ಯಗಳನ್ನು, ಸ್ವಯಂ ಕಲ್ಪಿತ ಚಿತ್ರಗಳನ್ನು, ತಾವು ಅಭ್ಯಸಿಸಿದ ವನ್ಯಜೀವಿಗಳನ್ನು ಬಹು ಸುಂದರವಾಗಿ ಚಿತ್ರಿಸುತ್ತಿದ್ದರು. ಮೈಸೂರಿನ ಮೃಗಾಲಯವನ್ನು ಮನೆಯಂತೆ ಭಾವಿಸಿ ಅಲ್ಲಿನ ಎಲ್ಲ ಬಗೆಯ ಮೃಗ ಪ್ರಾಣಿ ಪಕ್ಷಿಗಳನ್ನು ಚಿತ್ರಿಸುವ ಹವ್ಯಾಸ ಇವರದಾಗಿತ್ತು. ಕೆಲವಾರು ವರ್ಷಗಳ ಕಾಲ ಕಲಾ ವಿದ್ಯಾರ್ಥಿಯಂತೆ ಅಭ್ಯಾಸ ನಡೆಸಿದರು. ಇದು ಅವರ ಕಲೆಗೆ ಮೆರುಗು ಕೊಟ್ಟಿತು.

ಚಿತ್ರ ಕಲೆಯಲ್ಲಿ ಅವರಿಗೆ ಮೊದಲು ಆಸಕ್ತಿ ಮೂಡಿದುದು ಅವರ ತಂದೆತಾಯಿಗಳಿಂದ. ಅವರೇ ಸೂಫಿ ಅವರ ಪ್ರಥಮ ಕಲಾಗುರುಗಳು. ತಂದೆ ಫಜಲ್ ಅಲಿ. ಕೋರ್ಟಿನಲ್ಲಿ ಅರ್ಜಿ ಬರೆದು ಕೊಡುವ ಕಾಯಕ. ತಾಯಿ ಅಯತಬಿ ಕಲೆಯ ಬಗ್ಗೆ ಅಪಾರ ಪ್ರೀತಿ ಆಸಕ್ತಿ. ಸೂಫಿ ತಮ್ಮ ಎಳೆಯ ವಯಸ್ಸಿನಲ್ಲಿ ಚಿತ್ರ ರಚನೆಯಲ್ಲಿ ಅಭಿರುಚಿ ತೋರಲು ಅವರ ಮಾತಾಪಿತೃಗಳೇ ಕಾರಣರಾದರು. ಮುಂದೆ ಕಾಬುಲಿಗೆ ತೆರಳಿ ಅಲ್ಲಿ ಕಲಾಶಾಲೆ ತೆರೆದ ಮೈಸೂರು ಅರಮನೆಯ ಕಲಾವಿದ ದಿ. ಜನಾಬ್ ಎಂ.ಎ. ಅಜೀಜರ ಪ್ರೋತ್ಸಾಹವೂ ಕಾರಣವಾಯಿತು.

ಸೂಫಿ ಅವರು ಜನಿಸಿದ್ದು ೧೯೧೬ರಲ್ಲಿ. ಕರ್ನಾಟಕದ ಕಲಾಕ್ಷೇತ್ರದಲ್ಲಿ ಧ್ರುವತಾರೆಯಂತೆ ಮೆರೆದ ಇವರ ಚಿತ್ರಣದ ಪಕ್ಷಿನೋಟ ಕುತೂಹಲಕಾರಿಯಾದುದು. ಯುವ ಪೀಳಿಗೆಗೆ ಆದರ್ಶ ಪ್ರಾಯವಾದುದು.

ಇವರು ೧೯೨೯ ರಲ್ಲಿ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಗೆ ಸೇರಿ ಚಿತ್ರ ಕಲಾಭ್ಯಾಸ ನಡೆಸಿದರು. ಭಾವಚಿತ್ರ ರಚನೆಯಲ್ಲಿ ಪ್ರಸಿದ್ಧರಾಗಿದ್ದ ದಿ. ಕೆ. ಕೇಶವಯ್ಯ, ನಿಸರ್ಗ ಚಿತ್ರ ಕಲೆಯಲ್ಲಿ ಸಿದ್ಧಹಸ್ತರೆನಿಸಿದ್ದ ದಿ. ಎಸ್.ಜಿ. ಟಂಕಸಾಲೇ, ಇನ್ನೋರ್ವ ಖ್ಯಾತ ಕಲಾವಿದ ದಿ. ವೇಣುಗೋಪಾಲ ನಾಯ್ಡು – ಈ ಮೂರು ಜನ ಇವರ ಕಲಾಗುರುಗಳಾಗಿದ್ದರು. ತಮ್ಮ ಕಲಾಗುರುಗಳಿಗೆ ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಇವರು ರೂಪ ಚಿತ್ರ, ನಿಸರ್ಗ ಚಿತ್ರ, ಸಂಯೋಜನ ಚಿತ್ರ ಮುಖ್ಯವಾಗಿ ರೇಖಾ ಚಿತ್ರದಲ್ಲೂ ಕೈ ಕುದುರಿಸಿಕೊಂಡು ಎಲ್ಲರಿಂದಲೂ ಸೈ ಎನ್ನಿಸಿಕೊಂಡರು. ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿ ಕಲಾಶಾಲೆಯಿಂದ ಹೊರಬಂದರು.

ಆಗ ಸೂಫಿ ಅವರ ಜೊತೆ ಕಲಾಭ್ಯಾಸ ಮಾಡಿದ ಪ್ರಮುಖ ಮಿತ್ರರೆಂದರೆ ಸುಪ್ರಸಿದ್ಧ ಪ್ರಕೃತಿ ಚಿತ್ರಕಾರರಾಗಿದ್ದ ದಿ. ಎನ್. ಹನುಮಯ್ಯ, ಭಾವಚಿತ್ರ ಕಲಾ ನಿಪುಣ ಬಿ.ಎಚ್.

ರಾಮಚಂದ್ರ, ದಿ. ಅಬ್ದುಲ್ ಅಜೀಜ್ (ದಿ. ಎಂ.ಎ. ಅಜೀಜರ ಪುತ್ರ). ಇನ್ ಲೇ ಚಿತ್ರ ಕಲೆಯಲ್ಲಿ ಮುಂದೆ ಖ್ಯಾತಿ ಪಡೆದ ದಿ. ಮೀರ್ ಶೌಕತಾಲಿ, ದಿ. ಎಂ.ಎ. ಕೃಷ್ಣಸ್ವಾಮಿ, ಕಾಫಿ ಬೋರ್ಡಿನ ಕಲಾವಿದರಾಗಿದ್ದ ದಿ. ನಾರಾಯಣ್, ಕೇಶವ ಮೂರ್ತಿ ಮೊದಲಾದವರು ನೆನಪಿಗೆ ಬರುತ್ತಾರೆ.

ಕಲಾಶಾಲೆಯಿಂದ ಹೊರಬಂದ ಇವರು ಎರಡು ವರ್ಷಗಳ ಕಾಲ ಯಾವುದೇ ಉದ್ಯೋಗಕ್ಕೂ ಸೇರದೆ ಹೋದರು. ಉನ್ನತ ಕಲಾಭ್ಯಾಸ ಮಾಡುವ ಆಸೆ ಇದ್ದಿತು. ಮನೆಯ ಕಡೆಯ ತೊಂದರೆಯೂ ಜೊತೆಗೂಡಿ ದಿಕ್ಕು ತೋಚದಂತಾಯಿತು. ಮೈಸೂರಿನ ಮೃಗಾಲಯವನ್ನು ಹೊಕ್ಕರು. ಅಲ್ಲಿ ಇವರಿಗೆ ಶಾಂತಿ ದೊರೆಯುತ್ತಿತ್ತು. ಅಲ್ಲಿನ ಪ್ರತಿಯೊಂದು ಪ್ರಾಣಿಯನ್ನು ಕೂಲಂಕಷವಾಗಿ ಅಭ್ಯಸಿಸಿದರು. ಪ್ರಾಣಿ ಪಕ್ಷಿಗಳ ಹಾವಭಾವ ಭಿನ್ನಾಣ ರೀತಿ ನೀತಿಗಳನ್ನು ಕರಗತ ಮಾಡಿಕೊಳ್ಳಲು ಅವರು ಎರಡು ವರ್ಷಗಳ ಕಾಲ ಹಗಲಿರುಳು ಶ್ರಮಿಸಿದರು.

ನಂತರ ಅವರಿಗೆ ಉನ್ನತ ಕಲಾಶಿಕ್ಷಣಕ್ಕಾಗಿ ಬೊಂಬಾಯಿಗೆ ಹೋಗಿಬರಬೇಕೆಂಬ ಬಯಕೆ ಮತ್ತೆ ಮರುಕಳಿಸಿತು. ತಂದೆ ತಾಯಿಗಳು ವೃದ್ಧರು, ದುಡಿಯುವ ಶಕ್ತಿ ಇಲ್ಲದವರು. ಮನೆಯಲ್ಲಿ ಜೀವನ ನೌಕೆ ಸಾಗದಂಥ ಪರಿಸ್ಥಿತಿ. ಇದನ್ನು ಗಮನಿಸಿದ ಅವರಿಗೆ ದಿಕ್ಕು ತೋಚದಂತಾಯಿತು. ಅದೃಷ್ಟಕ್ಕೆ ಮೈಸೂರು ಸರ್ಕಾರದ ವತಿಯಿಂದ ಸೂಫಿ ಅವರಿಗೆ ವಿದ್ಯಾರ್ಥಿ ವೇತನ ದೊರಕಿತು. ಬೊಂಬಾಯಿ ಸರ್.ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ಅವರಿಗೆ ಚಿತ್ರ ಕಲಾಭ್ಯಾಸ ಮಾಡಲು ಪ್ರತಿ ಮಾಹೆ ೩೫ ರೂಪಾಯಿಗಳ ವಿದ್ಯಾರ್ಥಿ ವೇತನ (ಆ ಕಾಲಕ್ಕೆ ಈ ಮೊತ್ತ ದೊಡ್ಡದು) ನೀಡಲಾಯಿತು. ಆದರೆ ಇಷ್ಟು ಹಣ ಬೊಂಬಾಯಿಯ ದಿನ ನಿತ್ಯದ ವೆಚ್ಚಕ್ಕೆ ಏನೇನೂ ಸಾಲದಾಗಿತ್ತು.

ತಂದೆ ತಾಯಿ ಅವರ ಆಶೀರ್ವಾದ ಪಡೆದರು. ಧೈರ್ಯ ತಾಳಿ ಬೊಂಬಾಯಿ ನಗರ ತಲುಪಿದರು. ಜೆ.ಜೆ. ಕಲಾಶಾಲೆಗೆ ಸೇರಿದರು. ತೊಂದರೆಯಲ್ಲಿದ್ದ ತಂದೆ ತಾಯಿಗಳಿಂದ ಒಂದು ಚಿಕ್ಕಾಸನ್ನೂ ತರಿಸಿಕೊಳ್ಳಬಾರದೆಂದು ಅವರು ನಿರ್ಧರಿಸಿಬಿಟ್ಟರು. ಬಿಡುವಿನ ವೇಳೆಯಲ್ಲಿ ಎಲ್ಲಾದರೂ ದುಡಿದರೆ ಆಯ್ತು ಎಂಬ ಆತ್ಮವಿಶ್ವಾಸ ಅವರದಾಗಿತ್ತು. ಬ್ರಿಟಿಷ್ ಇಂಡಿಯಾ ಪ್ರೆಸ್ಸಿನಲ್ಲಿ ಅವರಿಗೆ ಒಂದು ಅರೆಕಾಲಿಕ ಕೆಲಸವೂ ದೊರಕಿತು. ರೇಖಾಚಿತ್ರಣದಲ್ಲಿ ನಿಪುಣರಾಗಿದ್ದ ಅವರಿಗೆ ಪ್ರೆಸ್ಸಿನ ಅಧಿಕಾರಿ ಬಹುಬೇಗ ಆತ್ಮೀಯನಾದ, ನೆರವಾಗಲು ಮುಂದೆ ಬಂದರು, ಸೂಫಿ ಅವರು ಬೊಂಬಾಯಿಯಲ್ಲಿ ಇದ್ದಷ್ಟು ದಿನವೂ ಅವರ ಜೇಬು ಖಾಲಿ ಆಗಲಿಲ್ಲ. ತಾವು ಹೀಗೆ ದುಡಿದು ಸಂಪಾದಿಸಿದ ಹಣದಲ್ಲಿ ಮನೆಗೂ ತಪ್ಪದೆ ಕಳಿಸುವುದನ್ನು ಎಂದೂ ಮರೆತವರಲ್ಲ. ವೃದ್ಧ ಮಾತಾಪಿತೃಗಳು ದೂರದಿಂದಲೇ ಮನದುಂಬಿ ಹರಸುತ್ತಿದ್ದರು.

ಇವರು ಬೊಂಬಾಯಿಯಲ್ಲಿ ಇದ್ದಷ್ಟು ಕಾಲ ಸಜ್ಜನರ ಸಹವಾಸದಲ್ಲಿದ್ದರು. ಅಡ್ಡದಾರಿ ಹಿಡಿದವರಲ್ಲ. ಟೀ ಸೇವನೆ ಬಿಟ್ಟರೆ ಬೇರೆ ಯಾವ ಚಟವೂ ಇವರಿಗಿರಲಿಲ್ಲ. ತಾವಾಯಿತು ತಮ್ಮ ಕಲಾವ್ಯಾಸಂಗವಾಯಿತು. ದುಷ್ಟರ ಸಂಗ ಇವರ ವ್ಯಕ್ತಿತ್ವಕ್ಕೆ ಬಹು ದೂರವಾಗಿತ್ತು. ಸತತ ಚಿತ್ರ ಕಲಾಭ್ಯಾಸ ಒಂದೇ ಇವರ ಹವ್ಯಾಸವಾಯಿತು. ಇದರಿಂದಾಗಿ ನಾಲ್ಕನೆಯ ಕಲಾ ತರಗತಿಯಲ್ಲಿ ಪ್ರಥಮ ಬಹುಮಾನ ಪಡೆಯುವಂತಾಯಿತು.

ಇವರ ಕಲಾನೈಪುಣ್ಯತೆ ಕಲಾಶಾಲೆಯ ಡೈರೆಕ್ಟರ್ ಆಗಿದ್ದ ಜೆ.ಡಿ. ಜರಾಲ್ಡಿನ್‌ರು ಹಾಗೂ ಕಲಾಧ್ಯಾಪಕರಾಗಿದ್ದ ಪ್ರೋ. ಭೋನ್‌ಸ್ಲೆಯವರ ದೃಷ್ಟಿಗೆ ಬೀಳುವಂತಾಯಿತು. ಮುಂದೆ ಜೆ. ಜೆ. ಕಲಾಶಾಲೆಯ ವಿದ್ಯಾರ್ಥಿ ವೇತನವನ್ನು ಇವರು ಪಡೆದುಕೊಳ್ಳುವಂತಾಯಿತು. ಹೀಗೆ ಕನ್ನಡಿಗ ಕಲಾವಿದ್ಯಾರ್ಥಿ ಸೂಫಿ ಕಲಾಶಾಲೆಯಲ್ಲಿ ಎಲ್ಲರ ಗೌರವಕ್ಕೂ ಪ್ರೀತಿಗೂ ಪಾತ್ರರಾದರು.

ಸೂಫಿ ಅವರ ಜೊತೆ ಕಲಾಭ್ಯಾಸ ಮಾಡುತ್ತಿದ್ದ ಅನೇಕ ಮಿತ್ರರಲ್ಲಿ ಮೈಸೂರಿನ ದಿ. ಮೀರ್ ಶೌಕತ್ತಾಲಿ ಒಬ್ಬರು. ಇವರು ಮೈಸೂರಿನ ಮಂಡಿ ಮೊಹಲ್ಲಾದಿಂದ ಬಂದವರು. ಮುಂದೆ ಇನ್‌ಲೇ ಕಲೆಯಲ್ಲಿ ರಾಷ್ಟ್ರ ಪ್ರಶಸ್ತಿ ಗಳಿಸಿದ ಖ್ಯಾತಿ ಕಲಾವಿದರಾಗಿದ್ದರು. ಇನ್ನೊಬ್ಬ ಮಿತ್ರ ದಿ. ಮುಕ್ರಿ ಸೂಫಿ ಅವರ ಆತ್ಮೀಯ. ಈತ ಮುಂದೆ ಹಿಂದಿ ಚಲನಚಿತ್ರರಂಗದಲ್ಲಿ ಪ್ರಸಿದ್ಧ ಕಮೆಡಿಯನ್ ಪಾತ್ರಧಾರಿಯಾಗಿ ಹೆಸರು ಮಾಡಿದರು. ಇವರಿಬ್ಬರು ಮಿತ್ರರ ಜೊತೆಯಲ್ಲಿ ಸೂಫಿ ತಾವು ಬೊಂಬಾಯಿಯಲ್ಲಿ ಕಳೆದ ಮಧುರ ದಿನಗಳನ್ನು ಆಗಾಗ ನನ್ನೊಂದಿಗೆ ಸ್ಮರಿಸುತ್ತ, "ಮಿಂಚಿ ಮಾಯವಾದ ಎರಡು ನಕ್ಷತ್ರಗಳು" ಎನ್ನುತ್ತಿದ್ದರು.

ಬೊಂಬಾಯಿಯಲ್ಲಿದ್ದಾಗ ಅವರು ತಮ್ಮ ಬಿಡುವಿನ ವೇಳೆಯನ್ನು ವ್ಯರ್ಥವಾಗಿ ಕಳೆಯದೆ ಪ್ರಸಿದ್ಧ ಕಲಾವಿದ ಸರ್ದಾರ್ ಸಿಂಗರ ಸ್ಟುಡಿಯೋವಿಗೆ ಆಗಾಗ ಭೇಟಿ ನೀಡುತ್ತಿದ್ದರು. ಅಲ್ಲೂ ಹೆಚ್ಚಿನ ರೀತಿಯಲ್ಲಿ ಕಲಾತಂತ್ರಜ್ಞಾನವನ್ನು ಗಳಿಸಿಕೊಂಡರು.

ಸಂಜೆಯವೇಳೆ ಸಮುದ್ರದ ತೀರದಲ್ಲೋ, ಮಸೀದಿಯ ಮೂಲೆಯಲ್ಲೋ ಕುಳಿತು ಶಾಂತಚಿತ್ತರಾಗಿ ತಮ್ಮದೇ ಆದ ಕಲ್ಪನಾ ಲೋಕದಲ್ಲಿ ತಲ್ಲೀನರಾಗುತ್ತಿದ್ದರು.

೧೯೩೩ರಲ್ಲಿ ಜೆ.ಜೆ. ಕಲಾಶಾಲೆಯ ವತಿಯಿಂದ ಅಜಂತ ಎಲ್ಲೋರ ಕಲಾಕೇಂದ್ರಗಳಿಗೆ ಅವರು ತಮ್ಮ ಮಿತ್ರರ ಜೊತೆ ಕಲಾಯಾತ್ರೆ ಮಾಡಿ ಬಂದರು. ಅಲ್ಲಿಯ ಗುಹೆಗಳಲ್ಲಿನ ಭಿತ್ತಿ ಚಿತ್ರಗಳು, ಶಿಲ್ಪ ಕೃತಿಗಳು, ಯಾವುದೇ ವಿದೇಶಿಯರ ಕಲೆಗಿಂತ ಕಡಿಮೆ ಅಲ್ಲ ಎಂಬುದನ್ನು ಅವರು ಚೆನ್ನಾಗಿ ಅರಿತರು. ಒಂದು ಕ್ಷಣವನ್ನು ವ್ಯರ್ಥವಾಗಿ ಕಳೆಯದೆ, ಅನೇಕ ಚಿತ್ರಗಳನ್ನು ಬಿಡಿಸಿಕೊಂಡು ಬಂದರು. ಅವು ಬೊಂಬಾಯಿಯಲ್ಲಿ ಪ್ರದರ್ಶನಗೊಂಡವು. ಬಹುಜನ ಕಲಾಭಿಮಾನಿಗಳ ಮೆಚ್ಚಿಗೆ ಗಳಿಸಿದುವು. ಕೀರ್ತಿ ತಂದುಕೊಟ್ಟವು. ಎಲ್ಲ ಚಿತ್ರಗಳೂ ವಿಕ್ರಯವಾಗಿ ಕೈ ತುಂಬಾ ಹಣ ಬಂದಿತಲ್ಲದೆ ಅಪರಿಮಿತವಾದ ಸಂತೋಷವನ್ನು ತಂದುಕೊಟ್ಟವು.

ಇವರಿಗೆ ಬೊಂಬಾಯಿಯಲ್ಲಿ ಬಹು ಪ್ರಿಯವಾದ ಸ್ಥಳ ಅಂದರೆ 'ಜುಮ್ಮಾ ಮಸೀದಿ'. ಅಲ್ಲಿಗೆ ದಿನನಿತ್ಯ ತಪ್ಪದೆ ಭೇಟಿ ಕೊಡುತ್ತಿದ್ದರು. ಆ ಸುಂದರ ಪವಿತ್ರ ಮಸೀದಿಯನ್ನು ಸೊಗಸಾಗಿ ಒಮ್ಮೆ ರೇಖೆಗಳಲ್ಲಿ ಮತ್ತೊಮ್ಮೆ ಜಲವರ್ಣದಲ್ಲಿ ಚಿತ್ರ ಬಿಡಿಸಿದರು. ಅಲ್ಲಿಯ ಅನೇಕರು ಇವರಿಗೆ ಪರಿಚಯವಾದರಲ್ಲದೆ ಅಲ್ಲಿಯ ಆಡಳಿತಾಧಿಕಾರಿ ಆ ಚಿತ್ರಗಳನ್ನು ಮನಸಾರೆ ಮೆಚ್ಚಿಕೊಂಡ ಕಾರಣಕ್ಕೆ ಆತನಿಗೇ ಕಾಣಿಕೆಯಾಗಿ ಕೊಟ್ಟುಬಿಟ್ಟರು. "ಗೊಂದಲ ಹಾಗೂ ಗಡಿಬಿಡಿ ಜೀವನದ ಬೊಂಬಾಯಿ ಮಹಾನಗರದಲ್ಲಿ 'ಜುಮ್ಮಾ ಮಸೀದಿ'ಯ ಪರಿಸರ ನನಗೆ ಶಾಂತಿ ನೀಡುತ್ತಿತ್ತು" ಎಂದು ಸೂಫಿ ಅವರು ಅನೇಕ ಸಾರಿ ಹೇಳುತ್ತಿದ್ದರು.

ಸೂಫಿ ಅವರು ಬೊಂಬಾಯಿಯ ಜೆ.ಜೆ. ಕಲಾಶಾಲೆಯಲ್ಲಿ ಅವಿಶ್ರಾಂತವಾಗಿ ಚಿತ್ರಕಲೆಯನ್ನು ಅಭ್ಯಸಿಸಿ ಜೆ.ಡಿ. ಆರ್ಟ್ ಡಿಪ್ಲೋಮಾ ಪಡೆದು ಮೈಸೂರಿಗೆ ಹಿಂತಿರುಗಿದರು.



ನಂತರ ತಾವು ಹಿಂದೆ ಚಿತ್ರಕಲೆಯನ್ನು ಅಭ್ಯಾಸ ಮಾಡಿದ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಚಿತ್ರಕಲಾಧ್ಯಾಪಕರಾಗಿ ೧೯೪೨ರಲ್ಲಿ ನೇಮಕಗೊಂಡರು. ತಮ್ಮ ಶಿಷ್ಯರಿಗೆ ಪ್ರೀತಿ ವಿಶ್ವಾಸದಿಂದ ನಿಸರ್ಗ ಚಿತ್ರ, ರೂಪಚಿತ್ರ, ಸಂಯೋಜನ ಚಿತ್ರ ರಚಿಸಲು ಸುಲಭೋಪಾಯವಾಯಿತು. ಅವರ ಬೋಧನ ಕ್ರಮ, ನಿಷ್ಠೆ, ಶಿಸ್ತು, ಔದಾರ್ಯಗಳು ಶಿಷ್ಯರಿಗೆ ಅಚ್ಚುಮೆಚ್ಚಾಗಿ ಕಂಡವು. ಮುಖ್ಯವಾಗಿ ಮೈಸೂರಿನ ಮೃಗಾಲಯದಲ್ಲಿ ಹುಲಿ, ಸಿಂಹ, ಚಿರತೆ, ಕರಡಿ, ಒಂಟೆ, ಜಿಂಕೆ, ಆನೆ, ನವಿಲು, ಹಾವು, ಕೋತಿ ವಿವಿಧ ಪಕ್ಷಿಗಳೇ ಮೊದಲಾದ ವನ್ಯಜೀವಿಗಳ ಚಿತ್ರ ರಚನೆಯಲ್ಲಿ ಅವರಿಗೆ ಹೆಚ್ಚು ಆಸಕ್ತಿ ಇದ್ದುದರಿಂದ ತಮ್ಮ ವಿದ್ಯಾರ್ಥಿಗಳೂ ಆ ಬಗ್ಗೆ ಸಾಕಷ್ಟು ಶ್ರದ್ಧೆ ವಹಿಸುವಂತೆ ನೋಡಿಕೊಂಡರು. ಮೈಸೂರಿನ ಮಂಡಿ ಮೊಹಲ್ಲಾದ ಹುಡುಗ (ಇನ್‌ಲೆ) ಚಿತ್ರ ಕುಶಲಕರ್ಮಿಗಳಿಗೆ ಇದರಿಂದ ಹೆಚ್ಚಿನ ಪ್ರೋತ್ಸಾಹ ದೊರಕುವಂತಾಯಿತು.

ಚಾಮರಾಜೇಂದ್ರ ಕಲಾಶಾಲೆಯಲ್ಲಿ ಆಗ ದಿ. ಎಸ್. ರಾಮಸ್ವಾಮಿ ಅವರು ಮುಖ್ಯಸ್ಥರಾಗಿದ್ದರು. ಕಲೆಗೆ ಪ್ರೋತ್ಸಾಹ ನೀಡಿದ ಹೆಗ್ಗಳಿಕೆ ಇವರದಾಗಿತ್ತು. ದಿ. ವೈ. ಸುಬ್ರಹ್ಮಣ್ಯರಾಜು, ದಿ. ಎಸ್. ನಂಜುಂಡಸ್ವಾಮಿಗಳು ಚಿತ್ರಕಲಾ ವಿಭಾಗದ ಅಧ್ಯಾಪಕರಾಗಿದ್ದರು. ದಿ. ಎಂ. ವೀರಪ್ಪನವರೂ ಅನಂತರ ಕಲಾಧ್ಯಾಪಕರಾಗಿ ಬಂದು ಸೇರಿದರು. ಇವರೆಲ್ಲರೂ ಬೊಂಬಾಯಿ ಜೆ.ಜೆ. ಕಲಾಶಾಲೆಯಲ್ಲಿ ಚಿತ್ರಕಲಾ ವ್ಯಾಸಂಗ ಮಾಡಿ ಬಂದವರೇ ಆಗಿದ್ದರು. ಕಲಾವಿದ ದಿ. ಎನ್.ಜಿ. ಪಾವಂಜಿ ಕಲಾಶಾಲೆಯ ಕಲಾ ವಿಭಾಗದ ಉಪಮುಖ್ಯಸ್ಥರಾಗಿಯೂ ಇದ್ದವರು. ಶ್ರೀ ರಾಜಶೇಖರಯ್ಯ, ಶ್ರೀ ಎಂ.ಜಿ. ಶುದ್ಧೋದನರೂ ಅನಂತರ ಚಾಮರಾಜ ಕಲಾ ಶಾಲೆಯಲ್ಲಿ ಚಿತ್ರಕಲಾ ವಿಭಾಗದಲ್ಲಿ ತಮ್ಮ ಸೇವೆ ಸಲ್ಲಿಸಿದವರು.

ದಿ. ಶಿಲ್ಪಿ ಬಸವಯ್ಯ, ದಂತ ಶಿಲ್ಪಿ ದಿ. ಹೆಚ್. ವೆಂಕಪ್ಪ, ಪಂಚಲೋಹದ ಶಿಲ್ಪಿ ದಿ. ಎನ್.ವಿ. ಚಿನ್ನಾಚಾರ್ಯ, ದಿ. ನರಸಿಂಹಾಚಾರ್ಯ, ದಿ. ಆಶೀರ್ವಾದಂ, ದಿ. ಲತೀಫ್, ದಿ. ನಂಜುಂಡಯ್ಯ ಮೊದಲಾದ ಕಲಾದಿಗ್ಗಜಗಳು ಚಾಮರಾಜೇಂದ್ರ ಕಲಾಶಾಲೆಯ ಕೀರ್ತಿ ಬೆಳಗಿಸಿದವರಾಗಿ ಯಾರೂ ಮರೆಯುವಂತಿಲ್ಲ. ಇವರೆಲ್ಲರ ಜೊತೆ ಸೂಫಿ ಮಾಸ್ತರರು ಎಲೆ ಮರೆಯ ಹೂವಿನಂತೆ ಇದ್ದು ತಮ್ಮ ಕಲಾಸೌರಭವನ್ನು ಬೀರುತ್ತಾ ಬಂದಿದ್ದರು.

ಸೂಫಿ ಅವರ ತರಗತಿಯಲ್ಲಿ ಕೆಲವಾರು ವಿದ್ಯಾರ್ಥಿಗಳು ಚಿತ್ರ ಕಲಾಭ್ಯಾಸದಲ್ಲಿ ಗಣನೀಯ ಪಾತ್ರ ವಹಿಸಿದ್ದರು. ಇದರ ಫಲವಾಗಿ ಕನ್ನಡ ನಾಡಿನ ಅನೇಕ ಸಂಸ್ಥೆಗಳಲ್ಲೂ ಕೈಗಾರಿಕಾ ಕ್ಷೇತ್ರದಲ್ಲೂ ಕಲಾಸೇವೆ ಮಾಡುವಂತಾಯಿತು. ಈ ನಿಟ್ಟಿನಲ್ಲಿ ಸೂಫಿ ಮಾಸ್ತರರ ಪಾತ್ರವು ಸಣ್ಣದೇನೂ ಅಲ್ಲ.

ಅವರ ಶಿಷ್ಯ ಬಳಗ ಬಹು ದೊಡ್ಡದು. ಅವರಿಗೆ ಕೀರ್ತಿ ತಂದ ಅನೇಕರು ವಿವಿಧ ಕ್ಷೇತ್ರದಲ್ಲಿ ಹೆಸರಾಗಿದ್ದಾರೆ. ಅವರೆಂದರೆ ಪುಣಚಿತ್ತಾಯ, ದಿ. ಜಿ.ಎನ್. ಶೆಣೈ, ದಿ. ಗೋವಿಂದಪ್ಪ, ಮರಿಸ್ವಾಮಿ, ಕುಪ್ಪಾಚಾರ್, ಎಂ.ವಿ. ಶಿವಣ್ಣ, ದಿ. ಹೆಚ್.ಎನ್. ಪಾಠಕ್, ಸುಬ್ಬಣ್ಣಚಾರ್, ವೆಂಕಟೇಶ್, ವಿಠಲ ಭಂಡಾರಿ, ಎಂ.ಬಿ. ಬಸವರಾಜು, ಸರೋಜ ಗುರುನಾಥ್, ಲಲಿತ ತಿಪ್ಪೇಸ್ವಾಮಿ, ಫಕರುನ್ನೀಸಾ, ಕಮಲ, ಅಕ್ತರ್ ಬೇಗಂ, ಪುಟ್ಟರಾಜು,



ಬಸವರಾಜ, ಬಸವಯ್ಯ, ಸುಂದರರಾಜ್, ಶಂಭು, ಎಂ.ಇ. ಗುರು, ಪಿ.ಆರ್.ಟಿ. ಮತ್ತು ಬಿ.ಜಿ. ಮಹಮ್ಮದರ ಪತ್ನಿ ಹೀಗೇ ದೊಡ್ಡ ಪಟ್ಟಿಯೇ ಬೆಳೆದು ಹೋಗುತ್ತದೆ.

ಸೂಫಿ ಅವರು ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕಲಾಧ್ಯಾಪಕರಾಗಿದ್ದಾಗ ಅವರಿಗೆ, ಅವರ ಸಹೋದ್ಯೋಗಿಗಳಿಗೆ, ಅವರ ಶಿಷ್ಯರಿಗೆ ಕಲಾ ಪ್ರೋತ್ಸಾಹ ಮೇಲಿಂದ ಮೇಲೆ ದೊರಕುತ್ತಿತ್ತು. ದಸರಾ ಬಂದಿತೆಂದರೆ ವಸ್ತು ಪ್ರದರ್ಶನವನ್ನು ಶೃಂಗರಿಸುವ ಕೆಲಸಗಳು ಅವರ ಪಾಲಿಗೆ ಬರುತ್ತಿದ್ದವು.

ದಸರಾ ವಸ್ತು ಪ್ರದರ್ಶನದ ಹಳೆಯ ಕಟ್ಟಡದಲ್ಲಿ (ಈಗ ಮೆಡಿಕಲ್ ಕಾಲೇಜಿಗೆ ಸೇರಿದೆ) ಹಿಂದೊಮ್ಮೆ ಕಾಟೇಜ್ ಇಂಡಸ್ಟ್ರೀಸ್ ಎಗ್ಜಿಬಿಷನ್ ಒಂದನ್ನು ಅಂದಿನ ಮಹಾರಾಜರ ಸರಕಾರ ಏರ್ಪಡಿಸಿದ್ದು ಇನ್ನೂ ನೆನಪಿದೆ.

ಆರು ಜನ ಹಿರಿಯ ಕಲಾವಿದರು ತಮ್ಮ ಶಿಷ್ಯರೊಂದಿಗೆ ಕೂಡಿಕೊಂಡು ದೊಡ್ಡ ದೊಡ್ಡ ಅಳತೆಯ (ಸಿನೀಮಾ ಬ್ಯಾನರಿನಂತೆ) ಚಿತ್ರಗಳನ್ನು ತೈಲವರ್ಣದಲ್ಲಿ ಬಿಡಿಸಿ ಪ್ರದರ್ಶಿಸಲಾಗಿತ್ತು. ಬಳಸಿದ ಬಣ್ಣ ಬಟ್ಟೆ ಉಪಕರಣ ಎಲ್ಲಾ ದೇಶೀಯವು. ವಸ್ತು ಕೂಡ ದೇಶಿಯ. ಇವುಗಳನ್ನು ಬಹಳ ನೈಜವಾಗಿ ಚಿತ್ರಿಸಲಾಗಿತ್ತು. ಕಲಾವಿದ್ಯಾರ್ಥಿಗಳಾಗಿದ್ದ ನಮಗೆ ಇವುಗಳ ರಚನೆ ಆರಂಭದಿಂದ ಪೂರ್ಣಗೊಳ್ಳುವತನಕ ನೋಡುವ ಭಾಗ್ಯ ದೊರಕಿತ್ತು. ಅದೂ ಹಿರಿಯ ಕಲಾವಿದರ ಚಾತುರ್ಯ ಶೈಲಿ, ಬಣ್ಣಗಾರಿಕೆ ಎಲ್ಲವೂ. ಸೂಫಿ ಅವರೂ ಒಂದೆರಡು ಚಿತ್ರಗಳನ್ನು ಬಿಡಿಸಿದ್ದರು. ಅವುಗಳಲ್ಲಿನ ಕಸೂತಿ ಹಾಕುವ ಸುಂದರ ಯುವತಿಯ ಚಿತ್ರ ಇಂದಿಗೂ ನನ್ನ ಮನಸ್ಸಿನಿಂದ ಮಾಸಿಲ್ಲ. ಈ ಚಿತ್ರವನ್ನು ನೋಡಿದ ಪ್ರೇಕ್ಷಕರು ಸಾವಿರಾರು ಜನ. ಹೀಗೆ ಹಿರಿಯ ಕಲಾವಿದರಾದ ಸುಬ್ರಹ್ಮಣ್ಯ ರಾಜು, ವೈ. ನಾಗರಾಜು, ಎಂ. ವೀರಪ್ಪ, ಎಸ್. ನಂಜುಂಡಸ್ವಾಮಿ, ಎಸ್. ಆರ್. ಅಯ್ಯಂಗಾರ್ ರಚಿಸಿದ ಚಿತ್ರಗಳು ಕೂಡ ಜನಮನವನ್ನು ಸೂರೆಗೊಂಡಿದ್ದವು. ಇವು ಹಣದ ಸಲುವಾಗಿ ಕಾಟಾಚಾರಕ್ಕೆ ರಚಿಸಿದವಾಗಿರಲಿಲ್ಲ. ಕಲೆಯ ಹಿರಿಮೆಯನ್ನು ಎತ್ತಿ ಹಿಡಿಯುವ ಕಲಾಕೃತಿಗಳಾಗಿದ್ದವು. ಇವುಗಳನ್ನು ರಚಿಸಿದ ಕಲಾವಿದರೆಲ್ಲರೂ ಬೊಂಬಾಯಿಯ ಜೆ.ಜೆ. ಕಲಾಶಾಲೆಯಿಂದ ಹೊರಬಂದವರು. ಪಾಶ್ಚಾತ್ಯ ಶೈಲಿಯಲ್ಲಿ ಸಿದ್ಧಹಸ್ತರಾಗಿ ಮೆರೆದರು.

ಈ ಕೃತಿಗಳ ಪ್ರದರ್ಶನವನ್ನು ಅಂದಿನ ಗೌರ್ನರ್ ಜನರಲ್ ಆಗಿದ್ದ ರಾಜಾಜಿ ಅವರು ಮೈಸೂರಿಗೆ ಆಗಮಿಸಿ ಉದ್ಘಾಟಿಸಿದ್ದು ಹೆಮ್ಮೆ ತರಿಸುವ ಸಂಗತಿಯಾಗಿತ್ತು. ಮುಂದೆ ಈ ಕಲಾ ಕೃತಿಗಳ ಪ್ರದರ್ಶನ ಮದರಾಸಿನ ಕಲಾ ಕ್ಷೇತ್ರದಲ್ಲೂ ಪ್ರದರ್ಶನಗೊಂಡದ್ದು ಕನ್ನಡಿಗರಾದ ಕಲಾವಿದರಿಗೆ ಕೀರ್ತಿ ಬಂದದ್ದು ಯಾರಾದರೂ ಮೆಚ್ಚುವಂತಹುದು. ಈ ಕೃತಿಗಳ ರಚನೆಯಿಂದ ಕಲಾವಿದ್ಯಾರ್ಥಿಗಳು ಕಲಿತದ್ದು ಅರಿತದ್ದು ಅಪಾರ. ಸೂಫಿ ಅವರ ಮತ್ತು ಅವರ ಮಿತ್ರ ಕಲಾವಿದರುಗಳ ಕಲಾತಂತ್ರಗಾರಿಕೆ, ಚಿತ್ರ ಬಿಡಿಸುವ ಗುಣಧರ್ಮವನ್ನು ತಿಳಿಯಲು ಅವಕಾಶ ದೊರಕಿದಂತಾಯಿತು. ಗುರು ಶಿಷ್ಯರಲ್ಲಿ ಮಧುರ ಬಾಂಧವ್ಯ ಬೆಳೆಯಲು ಸಹಾಯವಾಯಿತು.

ಸೂಫಿ ಅವರು ವಿದ್ಯಾಪಕ್ಷಪಾತಿಗಳಾಗಿದ್ದರು. ಕಷ್ಟಪಟ್ಟು ಅಭ್ಯಾಸ ಮಾಡುವ ವಿದ್ಯಾರ್ಥಿಗಳನ್ನು ಬಹಳವಾಗಿ ಹುರಿದುಂಬಿಸುತ್ತಿದ್ದರು. ನಿಜವಾದ ಕಲಾ ಕಲಿಕೆಗೆ ಪ್ರಾಮುಖ್ಯತೆ ಕೊಡುತ್ತಿದ್ದರೇ ವಿನಹ ಅದರಿಂದ ಬರುವ ಗಳಿಕೆಗೆ ಅಲ್ಲ.

ಅವರು ಭಾವಚಿತ್ರಗಳನ್ನು ರಚಿಸುವಾಗ ಸ್ವರೂಪ ಮೂಡಿಸುವಲ್ಲಿ ನೆರಳು ಬೆಳಕುಗಳ ವಿಭಾಗಗಳಿಗೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು. ಮಧ್ಯಮ ಛಾಯೆ ತರುವ ಕಡೆ ಅಷ್ಟಾಗಿ ಗಮನ ಕೊಡುತ್ತಿರಲಿಲ್ಲ. ಆದರೂ ಅವರು ಸೃಷ್ಟಿಸಬೇಕಾದ ವ್ಯಕ್ತಿಗಳ ತದ್‌ರೂಪ ಎದ್ದು ತೋರುತ್ತಿತ್ತು.

ಸೂಫಿ ಅವರು ಬಳಸುತ್ತಿದ್ದ ಜಲವರ್ಣವೋ ತೈಲವರ್ಣವೋ ಎಂದು ತಕ್ಷಣ ಗುರುತಿಸಲಾಗದಷ್ಟು ಕೌಶಲ್ಯ ಅವರ ವರ್ಣ ಬಳಕೆಯಲ್ಲಿ ವ್ಯಕ್ತವಾಗುತ್ತಿತ್ತು. ಅವರು ಚಿತ್ರಿಸುವ ಚಿತ್ರಗಳ ವರ್ಣ ತಂತ್ರ ಸಂಯೋಜನಾ ತಂತ್ರಗಳ ಪ್ರಭಾವವನ್ನು ತಮ್ಮ ಹಿರಿಯ ಕಲಾವಿದ ದಿ. ಎಂ.ಎ. ಅಜೀಜ್‌ರಿಂದ ಪಡೆದಿದ್ದರೆನಿಸುತ್ತದೆ. ವ್ಯಕ್ತಿಗಳ ಶರೀರ ಅಂಗಾಂಗಗಳ ಏರುತಗ್ಗುಗಳಲ್ಲಿ ಒಂದು ವಿಶೇಷವಾದ ಹೊಳಪನ್ನು ಸಹಜ ವರ್ಣಗಳಲ್ಲಿ ತರುವ ಕೌಶಲ ಸೂಫಿಯವರಿಗೆ ಸಿದ್ಧಿಸಿತ್ತು. ಇದರಿಂದಾಗಿ ಚಿತ್ರಗಳು ಸ್ವಾಭಾವಿಕವಾಗಿ ನಮ್ಮೆದುರು ನಿಂತಂತೆ ತೋರುತ್ತದೆ. ಇವೆಲ್ಲ ಗುಣಗಳನ್ನು ಅಜೀಜರ ಕೃತಿಗಳಿಂದ ಕಾಣಬಹುದಾಗಿದೆ. ದಿ. ಅಜೀಜರು ಸೂಫಿ ಅವರ ಪರೋಕ್ಷ ಗುರುಗಳೇ ಆಗಿದ್ದರು.

ಬಣ್ಣಗಳನ್ನು ಲೇಪಿಸುವ ಮುಂಚೆ ಅವುಗಳನ್ನು ಕಲೆಸುವಾಗಲೂ ಸೂಫಿ ಅವರಲ್ಲಿ ಒಂದು ರೀತಿಯ ಮಿಶ್ರಣದ ವೈವಿಧ್ಯತೆಯನ್ನು ಕಾಣಬಹುದಿತ್ತು. ನಿಖರವಾಗಿ ಇಂಥದೇ ಬಣ್ಣ ಎಂದು ಹೇಳುವ ಹಾಗೆ ಇರುತ್ತಿರಲಿಲ್ಲ. ಆದರೆ ಚಿತ್ರರಚನೆ ಪೂರ್ಣಗೊಂಡಾಗ ಆ ಚಿತ್ರದಲ್ಲಿ ಬೇಕಾಗಿರುವ ವರ್ಣ ವೈಖರಿ ಸೂಕ್ತವಾಗಿ ಗೋಚರವಾಗುತ್ತಿತ್ತು. ಈ ಎಲ್ಲ ಕಲಾವೈವಿಧ್ಯತೆಯನ್ನು ವಿದ್ಯಾರ್ಥಿಗಳಾದ ನಾವು ನೋಡಿ ಅಚ್ಚರಿಗೊಳ್ಳುತ್ತಿದ್ದೆವು.

ಇಷ್ಟೇ ಅಲ್ಲದೆ ವಿದ್ಯಾರ್ಥಿಗಳಿಗೆ ಪರ್‌ಸ್ಪೆಕ್ಟಿವ್ ಅಧ್ಯಯನವೂ ಬಹು ಮುಖ್ಯವಾಗಿತ್ತು. ಈ ವಿಷಯದಲ್ಲಿ ಸೂಫಿ ಮಾಸ್ತರರು ಸಾಕಷ್ಟು ಪರಿಣತಿ ಹೊಂದಿದ್ದರು. ಅದು ಕಲಾ ಪರೀಕ್ಷೆಯ ಪಠ್ಯ ವಿಷಯವಾಗಿದ್ದುದರಿಂದ ವಿದ್ಯಾರ್ಥಿಗಳಿಗೆ ಅವರು ಮನಮುಟ್ಟುವಂತೆ ಮನದಟ್ಟು ಮಾಡಿಕೊಡುತ್ತಿದ್ದರು. ಇದರ ಅಭ್ಯಾಸ ಭೂದೃಷ್ಟಿ ರಚನೆಗೆ ಅಗತ್ಯ ಎಂದು ವಿದ್ಯಾರ್ಥಿಗಳಿಗೆ ಅವರು ಪದೇ ಪದೇ ಒತ್ತಿ ಹೇಳುತ್ತಿದ್ದರು.

ಶಾಲೆಗಳಲ್ಲಿ ಸೂಫಿ ಅವರು ವನ್ಯ ಜೀವಿಗಳನ್ನು ವರ್ಣಗಳಲ್ಲಿ ಸಹಜವಾಗಿ ಚಿತ್ರಿಸಲು ರೇಖೆಗಳೂ ಮುಖ್ಯ ಎನ್ನುತ್ತಿದ್ದರು. ಅವರು ಎಳೆದು ತೋರಿಸುವ ರೇಖೆಗಳಲ್ಲಿ ಸ್ಪಷ್ಟತೆ, ಶೀಘ್ರತೆ ಮತ್ತು ಅಷ್ಟೇ ನವುರು ನಯಗಾರಿಕೆ ಇರುತ್ತಿತ್ತು. ಆಯಾಯ ಮೃಗ ಪಕ್ಷಿಗಳಲ್ಲಿ ಕಂಡುಬರುವ ಎಲ್ಲ ಗುಣಗಳನ್ನು ಕೆಲವೇ ರೇಖೆಗಳಲ್ಲಿ ಮೂಡಿಸಿ ತೋರಿಸುತ್ತಿದ್ದರು. ಒಂದು ಚಿರತೆಯೋ ಹುಲಿಯೋ ಯಾವುದಾದರೂ ಪ್ರಾಣಿಯ ಮೇಲೆ ಎರಗಿ ಬೀಳುವ ದೃಶ್ಯವನ್ನು ಚಿತ್ರಿಸುವಾಗ ಅವುಗಳು ನಿಂತ ನಿಲವು, ಸೆಟೆದ ಬಾಲ, ಅಂಗಾಂಗಗಳಲ್ಲಿ ಕಾಣುವ ವ್ಯತ್ಯಾಸ – ಎಲ್ಲವನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಿದ್ದಾರೆ ಎಂಬುದು ಅವರು ಚಿತ್ರಿಸುವ ಚಿತ್ರಗಳಿಂದ ವ್ಯಕ್ತವಾಗುತ್ತಿತ್ತು.

ಸೂಫಿ ಅವರು ಚಾಮರಾಜೇಂದ್ರ ಕಲಾ ಶಾಲೆಯಲ್ಲಿ ಕಲಾಧ್ಯಾಪಕರಾಗಿದ್ದಾಗ ಅವರನ್ನು ಸಮೀಪದಿಂದ ಕಂಡವರು ಅನೇಕ ಜನ, ಅವರಲ್ಲಿ ಆತ್ಮೀಯರಾದವರು ಜೊತೆಗೂಡಿ ದಿನ ಕಳೆದವರು ಕೆಲವರು. ಅಂಥವರಲ್ಲಿ ಕೆಲವರ ಸ್ನೇಹ ಸಂಪರ್ಕ ಸೂಫಿಯವರದಾಗಿತ್ತು. ಅವರನ್ನು ಕಂಡು ಕೇಳಿದಾಗ ಸೂಫಿ ಅವರ ನೈಜ ಚಿತ್ರ ನಮಗೆ

ದೊರೆಯುತ್ತದೆ. ಶಿಷ್ಯರಾಗಲು ಬಂದು ಮಿತ್ರರಾದವರು ಮತ್ತು ಇಂದಿಗೂ ನಮ್ಮೊಡನೆ ಇರುವವರು ಜನಾಬ್ ಮಹಮದ್ ಗೌಸ್ ಸಾಹೇಬರು. ೭೨ ವಯಸ್ಸಿನ ವೃದ್ಧರು. ಚಾಮರಾಜ ನಗರದ ವಾಸಿ ನಿವೃತ್ತಿ ಶಾಲಾಧ್ಯಾಪಕರು.

ಸುಮಾರು ೧೯೪೧ರಲ್ಲಿ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಸೂಫಿ ಅವರನ್ನು ಮೊದಲು ನೋಡಿದವರು ಮಹಮದ್ ಗೌಸ್ ಎಂಬ ವ್ಯಕ್ತಿ. ಇವರು ಮೈಸೂರಿನಲ್ಲಿ ಶಿಕ್ಷಕರ ತರಬೇತಿ ಶಾಲೆಯ ವಿದ್ಯಾರ್ಥಿಯಾಗಿದ್ದರು. ಸೂಫಿ ಅವರು ಉಡ್‌ಲ್ಯಾಂಡ್ ಟಾಕೀಸ್‌ನಲ್ಲಿ ಬರೆದ ಎರಡು ಭಿತ್ತಿ ಚಿತ್ರಗಳನ್ನು ಗೌಸ್ ಸಾಹೇಬರು ನೋಡಿ ಅಚ್ಚರಿಗೊಂಡರು. ಅವರನ್ನು ಹುಡುಕಿಕೊಂಡು ಹೋದರು. ಅವರಿಂದ ಡ್ರಾಯಿಂಗ್ ಅಭ್ಯಾಸ ಮಾಡುವ ಆಸೆ ಇವರದು. ಸೂಫಿ ಅವರು ಮಂಡಿಮೊಹಲ್ಲಾದ ಪಟ್ಟೇಗಾರ ಬೀದಿಯ ಮನೆಯಲ್ಲಿ ವಾಸವಾಗಿದ್ದರು. ಇವರಿಗೆ ಲಗ್ನವಾಗಿತ್ತು. ಐದು ಮತ್ತು ಆರು ವರ್ಷದ ಇಬ್ಬರು ಮಕ್ಕಳಿದ್ದರು. ಸೂಫಿ ಅವರಿಗೆ ಸ್ವಂತ ಮನೆ ಇದ್ದರೂ ಉಮ್ಮರ್‌ಖಾನ್ ಮಸೀದಿಯ ಒಂದು ಕೋಣೆಯಲ್ಲಿ ಅವರ ವಾಸ. ಅದು ಬೆಂಕಿ ನವಾಬರ ಬೀದಿಯಲ್ಲಿದೆ. ಅವರ ಕೋಣೆ ಯಾವತ್ತು ವಿದ್ಯಾರ್ಥಿಗಳಿಗೆ ಚಿತ್ರಕಲೆ ಅಭ್ಯಾಸ ಕೊಡಿಸುವ ತೆರೆದ ಬಾಗಿಲು. ಅದೂ ಎಲಿಮೆಂಟರಿ ವಿದ್ಯಾರ್ಥಿಗಳಿಗೆ ಬೇಕಾದ ಡ್ರಾಯಿಂಗ್‌ನಲ್ಲಿ ಸೂಫಿ ಅವರಿಂದ ಕೋಚಿಂಗ್ ಸಿಗುತ್ತಿತ್ತು. ಔಟ್‌ಲೈನ್, ಜಲವರ್ಣಗಳಲ್ಲಿ ಚಿತ್ರ ರಚನೆ ಅಭ್ಯಾಸ ಮಾಡಿಸುತ್ತಿದ್ದರು. ಇತರರಿಗೆ ತಾವು ಕಲಿಸಬೇಕೆಂಬ ಆಸೆ ಅವರಿಗೆ ಬಹಳವಾಗಿತ್ತು. ಆ ದಿನಗಳಲ್ಲಿ ಮೈಸೂರು ಸೀಮೆಯಲ್ಲಿ ಮೃಗಪಕ್ಷಿಗಳನ್ನು ಚಿತ್ರಿಸುವವರು ಅವರನ್ನು ಬಿಟ್ಟರೆ ಯಾರೂ ಇರಲಿಲ್ಲ ಅಂದರೆ ತಪ್ಪಾಗಲಾರದು. ರಜಾ ದಿನಗಳಲ್ಲಿ ತಮ್ಮೊಡನೆ ತಮ್ಮ ಶಿಷ್ಯರನ್ನು ಮೃಗಾಲಯಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಹೇಗೆ ಚಿತ್ರಿಸಬೇಕು ಎಂಬುವ ವಿಧಾನವನ್ನು ತೆರೆದ ಹೃದಯದಿಂದ ಹೇಳಿಕೊಡುತ್ತಿದ್ದರು.

ಸೂಫಿ ಅವರಲ್ಲಿ ಆಸೆಬುರುಕತನ ಇರಲಿಲ್ಲ. ಸ್ವಲ್ಪವೂ ಅಹಂ ಎಂಬುದು ಇರಲಿಲ್ಲ. ಮಗುವಿನಂಥ ಮನಸ್ಸು, ದೊಡ್ಡ ಕಲಾವಿದರೆಂದು ತಾವು ಎಂದೂ ಭಾವಿಸಿರಲಿಲ್ಲ ಮತ್ತು ಹಾಗೆ ತೋರಿಸಿಕೊಳ್ಳುತ್ತಿರಲಿಲ್ಲ. ತಮ್ಮ ವಿದ್ಯಾರ್ಥಿಗಳ ಜೊತೆ ತುಂಬ ಆತ್ಮೀಯವಾಗಿ ಬೆರೆಯುತ್ತಿದ್ದರು. ತಮ್ಮ ಶಿಷ್ಯರನ್ನು ಮುಂದೆ ತರಬೇಕು, ಅವರಿಗೆ ಕೀರ್ತಿ ಬಂದರೆ ತಮಗೆ ಕೀರ್ತಿ ಬಂದಂತೆ ಎಂದೇ ಕೊನೆಯತನಕ ಭಾವಿಸುತ್ತಿದ್ದರು. ಸೂಫಿ ಅವರನ್ನು ಸಮೀಪದಿಂದ ಕಂಡ ಮಹಮದ್ ಗೌಸ್ ಡ್ರಾಯಿಂಗ್ ಕಲಿಯುವ ಸಲುವಾಗಿ ಸೂಫಿ ಅವರ ಕೋಣೆಯಲ್ಲೇ ಮೂರು ವರ್ಷಗಳ ಕಾಲ ನೆಲೆಸಿದ್ದರು. ಸೂಫಿ ಅವರ ಜೊತೆ ಕಲಾವಿದ ಗೌಸ್ ಶೌಕತ್ತಾಲಿ ಅವರ ಇನ್‌ಲೇ ವರ್ಕ್‌ಷಾಪ್‌ಗೆ ಆಗಾಗ ಹೋಗಿಬರುತ್ತಿದ್ದರಂತೆ. ಕಲಾರಂಗದ ಈ ಇಬ್ಬರು ದಿಗ್ಗಜಗಳ ಮಧುರ ಮೈತ್ರಿ, ಹಾಸ್ಯಮಯ ಸಂಭಾಷಣೆಯನ್ನು ಗಮನಿಸಿ ಮೈಮರೆಯುತ್ತಿದ್ದರಂತೆ.

ಮಹಮದ್ ಗೌಸ್ ಅವರ ಜೊತೆ ಚಾಮರಾಜ ನಗರದಿಂದ ಮೈಸೂರಿಗೆ ಇನ್ನಿಬ್ಬರು ಅಧ್ಯಾಪಕರು ತರಬೇತಿಗೆಂದು ಬಂದರು. ಅಬ್ದುಲ್ ಅಮೀರ್ ಖಾನ್ ಹಾಗೂ ಅಬ್ದುಲ್ ರಸೀಬ್. ಇವರು ಮಹಮದ್ ಗೌಸ್ ಮೂಲಕ ಸೂಫಿ ಅವರ ಪರಿಚಯ ಮಾಡಿಕೊಂಡರು. ಅಷ್ಟೇ ಅಲ್ಲ ಇವರೆಲ್ಲರೂ ಸೂಫಿ ಅವರ ಕೋಣೆಯಲ್ಲೇ ತಳವೂರಿದರು. ಅದೂ ಎರಡು

ವರ್ಷಗಳ ಕಾಲ. ಡ್ರಾಯಿಂಗ್ ಕಲಿಯಲು ಬಂದವರು ಇವರು. ಕೋಣೆಯ ಬಾಡಿಗೆ ತೆರುವವರು ಸೂಫಿ. ವಾಸ ಮಾಡುವವರು ಈ ವಿದ್ಯಾರ್ಥಿಗಳು. ಅಣ್ಣ ತಮ್ಮಂದಿರಂಥ ಮಧುರ ಮಿತ್ರತ್ವ ಇವರದಾಗಿತ್ತು. ಗುರು ಶಿಷ್ಯರೆಂಬ ಭಾವ ತೆರೆಮರೆಗೆ ಸರಿದಿತ್ತು.

ಬಿಡುವಿನಲ್ಲಿ ಹೊರಗೆ ಸುತ್ತಿ ಬರಲು ಹೋದರೆ ಒಟ್ಟಿಗೇ ಸೂಫಿ ಅವರ ಜೊತೆ ಇರಲೇಬೇಕು. ಹೋಟೇಲ್‌ನಲ್ಲಿ ತಿಂಡಿ ತಿಂದ ಬಿಲ್ ಚುಕ್ತ ಮಾಡುವವರು ಸೂಫಿಯವರೇ. ವಿದ್ಯಾರ್ಥಿಗಳ ಕೈಯಿಂದ ಕೊಡಿಸಿದ್ದು ಎಂದೂ ಇಲ್ಲ. ಪ್ರತಿ ತಿಂಗಳು ಈ ಮೂರು ಜನ ವಿದ್ಯಾರ್ಥಿಗಳು ಚಾಮರಾಜನಗರದಿಂದ ಮೈಸೂರಿಗೆ ಬರುವಾಗ ತಾಜಾ ಬೆಣ್ಣೆಯನ್ನೋ ತೆಂಗಿನಕಾಯಿಗಳನ್ನೋ ಸೂಫಿ ಅವರಿಗೆ ತಂದು ಒಪ್ಪಿಸುತ್ತಿದ್ದರು. ಆದರೆ ಆ ಕ್ಷಣ ಸೂಫಿ ಅವರಿಗೆ ಅವುಗಳ ಬೆಲೆಯಷ್ಟು ಹಣ ಪಾವತಿ ಮಾಡುತ್ತಿದ್ದರು. ಅಚ್ಚರಿಯೆಂದರೆ ವಿದ್ಯಾರ್ಥಿಗಳು ತಾವು ತಂದ ಆ ಬೆಣ್ಣೆ ಆ ತೆಂಗಿನಕಾಯಿಯ ಅರ್ಧಪಾಲು ಅವರಿಗೇ ಸೇರುತ್ತಿತ್ತು. ಮೂರು ಜನರೂ ವಯಸ್ಸಿನಲ್ಲಿ ಚಿಕ್ಕವರು. ಸೂಫಿ ಅವರು ಹಿರಿಯರು. ಆದರೂ ಇವರ ಮಾತಿಗೆ ಬೆಲೆ ಕೊಡುತ್ತಿದ್ದರು.

ಒಮ್ಮೊಮ್ಮೆ ಈ ವಿದ್ಯಾರ್ಥಿಗಳು ತಾವು ತಂಗಿದ್ದ ಕೋಣೆಯನ್ನು ತಮ್ಮದು ಎಂದಾಗಲೂ "ಆಗಲಪ್ಪ ನಿಮ್ಮದೇ ರೂಮು" ಅನ್ನುತ್ತಿದ್ದರು. ವಾರಕ್ಕೆ ಒಮ್ಮೆ ಈ ವಿದ್ಯಾರ್ಥಿಗಳು ಚಾಮರಾಜನಗರಕ್ಕೆ ಹೋಗಿ ಬರುತ್ತಿದ್ದರು. ಅವರಲ್ಲಿ ಯಾರಾದರೂ ಹಿಂದಿರುಗದಿದ್ದದು ಕಂಡಾಗ ಸೂಫಿ ಮಾಸ್ತರು ತಕ್ಷಣ ಗಮನಿಸಿ "ಆತ ಏಕೆ ಬರಲಿಲ್ಲ?" ಎಂದು ವಿಚಾರಿಸುತ್ತಿದ್ದರು. ರೈಲಿಗೆ ಚಾರ್ಜು ಇಲ್ಲದಾಗ ಜೇಬಿನಿಂದ ತೆಗೆದು ಎಷ್ಟೋ ಸಾರಿ ಕೊಟ್ಟಿದ್ದಾರೆ. ಎಷ್ಟೋ ಸಾರಿ ಇವರು ಸೂಫಿ ಅವರನ್ನು ಚಾಮರಾಜನಗರಕ್ಕೆ ಆಹ್ವಾನಿಸಿದ್ದರು. ರೈಲು ಪ್ರಯಾಣ ಸೂಫಿಯವರಿಗೆ ಬಹು ಹಿಗ್ಗು. ಎರಡು ಮೂರು ಸಾರಿ ರೈಲಲ್ಲೇ ಹೋಗಿಬಂದಿದ್ದಾರೆ. ಶಿಷ್ಯರ ಅಪೇಕ್ಷೆ ನೆರವೇರಿಸಿದ್ದಾರೆ. ಪರೀಕ್ಷೆಗೆ ಬೇಕಾದ ರೀತಿಯಲ್ಲಿ ಡ್ರಾಯಿಂಗ್‌ನಲ್ಲಿ ತರಬೇತು ನೀಡಿ ಪ್ರಥಮ ಶ್ರೇಣಿಯಲ್ಲಿ ಪಾಸಾದುದನ್ನು ಗಮನಿಸಿ ಹಿಗ್ಗಿದ್ದಾರೆ.

ಒಮ್ಮೆ ಈ ವಿದ್ಯಾರ್ಥಿಗಳನ್ನು ಮೈಸೂರಿನ ಪ್ರಾಣಿ ಸಂಗ್ರಹಾಲಯಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಆನೆ ಮೇಲೆ ಅವರ ಜೊತೆ ಕುಳಿತು ಒಂದು ಸುತ್ತು ಹಾಕಿದ ನೆನಪನ್ನು ಮಹಮದ್ ಗೌಸ್ ಇಂದಿಗೂ ಹೇಳುತ್ತಾರೆ. ಅದೇ ವೇಳೆಗೆ ಹುಲಿಗೆ ತಿನ್ನಲು ಮಾಂಸ ಹಾಕುತ್ತಿದ್ದ ಸಂದರ್ಭದಲ್ಲಿ ಎರಡು ಹುಲಿಗಳು ಕಾದಾಡಲು ಪ್ರಾರಂಭಿಸಿದ್ದು, ಆಗ ಅಲ್ಲಿಯ ಕಾವಲುಗಾರ ಹುಲಿಯನ್ನು ಹೆದರಿಸಲು ಹೋದಾಗ ಸೂಫಿ ಮಾಸ್ತರರು ಗೌಸ್ ಸಾಹೇಬರನ್ನು ಹಿಂದಕ್ಕೆ ಎಳೆದು "ಹುಲಿ ಹೇಗೆ ಹಿಡಿದು ರಕ್ತ ಹೀರುತ್ತದೆ" ಎಂಬ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದರಂತೆ.

ಸೂಫಿ ಮಾಸ್ತರರು ತಮ್ಮ ವಿದ್ಯಾಥಿಗಳನ್ನು ಜಗನ್‌ಮೋಹನ್ ಚಿತ್ರಶಾಲೆಗೆ ಕರೆದುಕೊಂಡು ಹೋಗಿ ಅಲ್ಲಿ ಕಲಾವಿದರ ಚಿತ್ರಗಳನ್ನು ರಾಜಮಹಾರಾಜರ ವೇಷಭೂಷಣಗಳನ್ನು ಕರಕುಶಲ ವಸ್ತುಗಳನ್ನು ಪರಿಚಯಿಸಿ ಹೆಚ್ಚಿನ ಕಲಾಜ್ಞಾನವನ್ನು ಪಡೆಯಲು ಅವಕಾಶ ಮಾಡಿಕೊಡುತ್ತಿದ್ದರು. ಅಲ್ಲದೆ ಕೃಷ್ಣರಾಜಸಾಗರದ ರಾತ್ರಿ ವೇಳೆಯ ದೀಪಾಲಂಕಾರ ವರ್ಣರಂಜಿತ ಕಾರಂಜಿಗಳನ್ನು, ದೋಣಿ ವಿಹಾರ ಮೊದಲಾದವನ್ನು

ವೀಕ್ಷಿಸಿ ಬರಲು ಸೂಫಿ ಅವರು ತಮ್ಮ ವಿದ್ಯಾರ್ಥಿಗಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಬರುತ್ತಿದ್ದರು. ಹಾಗೇ ಹೋಗಿ ಬಂದ ಅವರು ತಮ್ಮ ಜಾಣ್ಮೆಯಿಂದ ಜಲವರ್ಣದಲ್ಲಿ ಸೃಷ್ಟಿಸಿದ ನಿಸರ್ಗ ಚಿತ್ರವೊಂದು ಚಾಮರಾಜೇಂದ್ರ ಕಲಾಶಾಲೆಯಲ್ಲಿ ಇಂದಿಗೂ ಶೋಭಿಸುತ್ತಲಿದೆ. ನಿಸರ್ಗ ಚಿತ್ರ ರಚನೆಯಲ್ಲಿ ಸೂಫಿ ಅವರ ಅದಮ್ಯ ಸಾಧನೆಗೆ ಈ ಒಂದು ಚಿತ್ರವೇ ಸಾಕ್ಷಿಯಾಗಿದೆ. ಇದು ವಿದ್ಯಾರ್ಥಿಗಳಿಗೆ ನಿಸರ್ಗ ಚಿತ್ರ ರಚನೆಗೆ ಪ್ರೇರಕ ಶಕ್ತಿ ನೀಡುತ್ತಾ ಬಂದಿತು. ನಿಸರ್ಗ ಚಿತ್ರಕಾರನಾದ ನನಗೆ ಸ್ಫೂರ್ತಿ ನೀಡಿದ ಚಿತ್ರಗಳಲ್ಲಿ ಇದು ಒಂದು ಎಂಬುದಂತೂ ನಿಜ. ಸೂಫಿಯವರಿಗೆ ಚಲನಚಿತ್ರ ನೋಡುವ ಗೀಳು ಇದ್ದಿತು. ಯಾವುದಾದರೂ ಉತ್ತಮ ಮಟ್ಟದ ಹಿಂದಿ ಚಿತ್ರ ಬಂದರೆ ಅದನ್ನು ತಪ್ಪದೇ ನೋಡುತ್ತಿದ್ದರು. ಇವರದು ಗಡುಸು ಸ್ವರವಲ್ಲ. ಮೃದು ಮಧುರವಾದ ಕೋಮಲ ಸ್ವರ.

ಸೂಫಿಯವರಿಗೆ ಒಮ್ಮೆ ಬಿಳಿಗಿರಿರಂಗನ ಬೆಟ್ಟದ ಪ್ರಕೃತಿ ಸೌಂದರ್ಯ ನೋಡಬೇಕೆನಿಸಿತು. ಆದರೆ ಆ ವೇಳೆಯಲ್ಲಿ ಬಸ್ಸು ಒಂದು ಅಪಘಾತಕ್ಕೀಡಾಗಿತ್ತು. ಅದನ್ನು ಕೇಳಿದ ಅವರು ಬಸ್ಸಿನ ಪ್ರಯಾಣವನ್ನೇ ಕೈ ಬಿಟ್ಟರು. ಅಂದಿನಿಂದ ರೈಲಿನ ಪ್ರಯಾಣವನ್ನು ಮಾಡಲು ತೀರ್ಮಾನಿಸಿದರು. ಅವರು ದೈವಭಕ್ತರಾಗಿದ್ದರು. ದಿನನಿತ್ಯ ಐದು ಸಾರಿ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಕುಸ್ತಿ ಹಾಗೂ ಫುಟ್‌ಬಾಲ್ ಆಟಗಳಲ್ಲಿ ಅವರಿಗೆ ತುಂಬಾ ಆಸಕ್ತಿ ಇತ್ತು.

ಸೂಫಿಯವರು ಚಾಮರಾಜೇಂದ್ರ ಕಲಾ ಶಾಲೆಯ ತಮ್ಮ ಸೇವೆಯಿಂದ ನಿವೃತ್ತಿಯಾಗುವ (೧೯೭೧) ಮುಂಚೆ ಒಂದು ಸಂಗತಿ ನಡೆಯಿತು. ಮಂಗಳೂರಿನ ಕಲಾವಿದರಾದ ಬಿ.ಜಿ. ಮಹಮ್ಮದ್‌ರವರ ಪತ್ನಿ ತೀರಿಕೊಂಡ ಸುದ್ದಿ ಸೂಫಿಯವರಿಗೆ ದುಃಖ ಉಂಟು ಮಾಡಿತು. ತಕ್ಷಣ ಮಹಮ್ಮದ್‌ರವರನ್ನು ಮೈಸೂರಿಗೆ ಕರೆಸಿದರು. ತಮ್ಮ ನೆಚ್ಚಿನ ಶಿಷ್ಯ ಅಕ್ತರ್ ಬೇಗಂರ ಜೊತೆ ಅವರ ಅಜ್ಜನ ಮೂಲಕ ಒಪ್ಪಿಗೆ ಪಡೆದು ಸರಳವಾಗಿ ಲಗ್ನ ಮಾಡಿಸಿದ್ದನ್ನು ಮಹಮ್ಮದ್‌ರವರು ನೆನಪು ಮಾಡಿಕೊಳ್ಳುತ್ತಾರೆ. ಜೀವನದಲ್ಲಿ ಅತಂತ್ರ ಸ್ಥಿತಿಯಲ್ಲಿದ್ದ ಮಿತ್ರ ಕಲಾವಿದ ಬಾಳನೌಕೆಯನ್ನು ಸುಗಮವಾಗಿ ಸಾಗುವಂತೆ ಮಾಡಿದ ಸೂಫಿಯವರ ದೊಡ್ಡ ಗುಣವನ್ನು ಇಂದಿಗೂ ಸ್ಮರಿಸುತ್ತಾರೆ.

ಚಾಮರಾಜೇಂದ್ರ ಕಲಾಶಾಲೆಯಲ್ಲಿ ಇವರು ತಮ್ಮ ಸಹೋದ್ಯೋಗಿಗಳ ಜೊತೆ ನಡೆದುಕೊಳ್ಳುತ್ತಿದ್ದ ರೀತಿ ಮತ್ತು ನನಗೆ ಚಿತ್ರ ಕಲಿಸುತ್ತಿದ್ದ ವಿಧಾನ ಆದರ್ಶಪ್ರಾಯವಾಗಿತ್ತು. ನಿಸರ್ಗ ಚಿತ್ರ ರಚನೆಯಲ್ಲಿ ವಿವಿಧ ರೀತಿಯ ತಂತ್ರ ಬಣ್ಣಗಾರಿಕೆಯನ್ನು ಮನದಟ್ಟು ಮಾಡುತ್ತಿದ್ದರು. ತರಗತಿಗಳಲ್ಲಿ ಅವರು ಕೆಲವೇ ಕ್ಷಣಗಳಲ್ಲಿ ಕಲ್ಪನಾ ಚಾತುರ್ಯದಿಂದ ನವುರಾದ ರೇಖೆಗಳಲ್ಲಿ ಮೃಗಪಕ್ಷಿಗಳನ್ನು ಚಿತ್ರಿಸಿ ನಮ್ಮನ್ನು ದಂಗುಬಡಿಸುತ್ತಿದ್ದರು.

೧೯೪೬ರ ಸಮಯ, ಆಗ ನಾನು ದಿ. ಎಸ್. ನಂಜುಂಡಸ್ವಾಮಿಗಳ ಕಲಾವಿದ್ಯಾರ್ಥಿ. ನಮ್ಮ ತರಗತಿಯ ಪಕ್ಕದಲ್ಲೇ ಸೂಫಿಯವರು ನಡೆಸುವ ತರಗತಿ. ಅಲ್ಲಿಯ ಅವರು ರಚಿಸುತ್ತಿದ್ದ ಅದೆಷ್ಟೋ ರೇಖಾ ಚಿತ್ರಗಳು ನಮ್ಮ ಮನದಲ್ಲಿ ಇಂದಿಗೂ ಅಚ್ಚಳಿಯದೇ ನಿಂತಿವೆ. ಜಲವರ್ಣ ಹಾಗೂ ತೈಲವರ್ಣ ಎರಡು ಮಾಧ್ಯಮಗಳಲ್ಲೂ ಏಕಪ್ರಕಾರದ ಸಾಧನೆ ಸಿದ್ಧಿ ಅವರದಾಗಿತ್ತು. ಆ ದಿನಗಳಲ್ಲಿ ಎಷ್ಟೋ ಜನ ಸಾಹಿತಿಗಳು ಬಂದು ಹೋಗಿದ್ದರು. ಅವರಲ್ಲಿ ದಿ. ಕೈಲಾಸಂರವರು ನಂಜುಂಡಸ್ವಾಮಿಯ ಸಾಹಿತ್ಯದಲ್ಲಿ ಚರ್ಚೆ ನಡೆಸುತ್ತಿದ್ದರು. ಸಂಸ್ಕೃತ ಜ್ಞಾನವಿದ್ದ ನಂಜುಂಡಸ್ವಾಮಿಗಳು ಅಲ್ಲಿದ್ದವರನ್ನು ಆಕರ್ಷಿಸುತ್ತಿದ್ದರು.

ಆಗ ಕೈಲಾಸಂ ಸೂಫಿಯವರು ರಚಿಸಿದ ಮೃಗ ಪಕ್ಷಿಗಳ ಅದರಲ್ಲೂ ಬಿಳಿ ನವಿಲು ಜೋಡಿಗಳನ್ನು ಕಂಡು ಮುಕ್ತಕಂಠದಿಂದ ಕೊಂಡಾಡುತ್ತಿದ್ದುದು ನೆನಪಾಗುತ್ತದೆ. ಅವರ ಮೆಚ್ಚುಗೆಯ ಮಾತುಗಳ ನಡುವೆ "ಟು ಬೈ ತ್ರಿ" ತಂದು ಕೊಡುವ ಕೆಲಸ ಮಾತ್ರ ನನ್ನ ಪಾಲಿನದ್ದಾಗಿತ್ತು. ಆಗ ಸ್ವಾಮಿಗಳು "ಓ ಸೂಫಿ ಸಾಹೇಬ್, ಬಾರಯ್ಯ ಕಾಫಿ ಬಂದಿದೆ" ಎಂದು ಗೌರವದಿಂದ ಕರೆಯುತ್ತಿದ್ದರು. ಕೈಲಾಸಂರವರು ಅಲ್ಲಿಂದ ಹೊರಹೋದರೆಂದರೆ 'ಎ ಸಾಬಿ ಏನು ಚಿತ್ರ ಬಿಡಿಸುತ್ತಿಯಾ ?' ಎಂದೋ ಇನ್ನೇನನ್ನೋ ಏಕವಚನದಲ್ಲಿ ಅದೂ ಸಲಿಗೆಯಿಂದ ವಿಚಾರಿಸುವುದು ಸ್ವಾಮಿಗಳ ಸಹಜ ಸ್ವಭಾವವಾಗಿತ್ತು. ಹಾಗೆ ಕರೆದರೂ ಸೂಫಿ ಅವರು ವಿಚಲಿತರಾಗದೆ ಶಾಂತಿಚಿತ್ತರಾಗಿಯೇ 'ಆಗ್ಲಿ ಸ್ವಾಮಿಗಳೇ' ಎಂದೇ ಉತ್ತರಿಸುತ್ತಿದ್ದರು. ತನ್ನ ಹಿರಿಯ ಅಣ್ಣನಂತೆ ಸ್ವಾಮಿಗಳ ಬಗ್ಗೆ ಗೌರವ ಭಾವ ಇತ್ತು. ಸ್ವಾಮಿಯವರ ಕಲಾಚಾತುರ್ಯವನ್ನು ಮುಕ್ತ ಕಂಠದಿಂದ ಹೊಗಳುತ್ತಿದ್ದರು. "ನಮ್ಮ ಸ್ವಾಮಿಗಳದು ಏನು ಕೈ ಚಿತ್ರ ಬರೆಯುವುದು ಬಿಡಿ ದಂತ ಕೆತ್ತನೆಯಲ್ಲಿ ದಂತ ಶಿಲ್ಪಿ ವೆಂಕಪ್ಪನವರನ್ನು ಮೀರಿಸಿ ಬಿಟ್ಟರಲ್ಲಾ" ಎನ್ನುತ್ತಿದ್ದರು. ಸಹೋದ್ಯೋಗಿಯನ್ನು ಹೃದಯ ತುಂಬಿ ಮಾತಾಡುವ ದೊಡ್ಡ ಔದಾರ್ಯ ಗುಣ ಸೂಫಿಯವರಲ್ಲಿ ಕಾಣಬಹುದಿತ್ತು.

ಸೂಫಿಯವರು ಸದಾ ಸ್ವಚ್ಛ ಮನಸ್ಸು; ಹಸನ್ಮುಖಿಗಳಾಗಿರುತ್ತಿದ್ದರು. ಅವರದು ದೊಡ್ಡ ಸಂಸಾರ ಮನೆ ತುಂಬಾ ಮಕ್ಕಳು ಮೊಮ್ಮಕ್ಕಳು; ಅಂದರೆ ನಾಲ್ಕು ಜನ ಹೆಣ್ಣು ಮಕ್ಕಳು, ಮೂರು ಜನ ಗಂಡು ಮಕ್ಕಳು. ಪುತ್ರ ನೂರ್ ಅಹಮ್ಮದ್ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಐದು ವರುಷಗಳ ಕಾಲ ಚಿತ್ರ ಕಲಾಭ್ಯಾಸ ನಡೆಸಿದ್ದಾರೆ. ಸಲೀಮುನ್ನಿಸಾ ಡಿ.ಟಿ.ಸಿ. ಮಾಡಿ ಡ್ರಾಯಿಂಗ್ ಟೀಚರ್ ಆಗಿದ್ದಾರೆ. ಓರ್ವ ಪುತ್ರಿ ವಿಶ್ವವಿದ್ಯಾನಿಲಯದ ಪದವೀದರಳು ಕೂಡ.

ಸೂಫಿಯವರು ಚಾಮರಾಜೇಂದ್ರ ಕಲಾ ಶಾಲೆಯಿಂದ ನಿವೃತ್ತರಾದ ಮೇಲೆ ಹೆಣ್ಣು ಮಕ್ಕಳ ಲಗ್ನ, ಸಾಲ ಇತ್ಯಾದಿ ಜೀವನ ನಿರ್ವಹಣೆಯ ತೊಂದರೆ ಅನುಭವಿಸಬೇಕಾಯಿತು. ಹಿರಿಯ ಪುತ್ರ ನೂರ್ ಅಹಮ್ಮದ್ ಸಂಪಾದನೆಗೆಂದು ದುಬೈ ತಲುಪಿದ. ಇಂಜಿನಿಯರಿಂಗ್ ಕಂಪನಿಯಲ್ಲಿ ಕಲಾಕಾರನಾಗಿ ಕೆಲಸ ಗಳಿಸಿದ. ಕೈ ತುಂಬಾ ಸಂಬಳ ಸಂಪಾದಿಸಿದ. ತಂದೆ ತಾಯಿಗಳಿಗೂ ಕಳುಹಿಸಿದ. ೧೨ ವರ್ಷಗಳ ಕಾಲ ಈತ ದುಬೈನಲ್ಲಿದ್ದು ನಡುವೆ ಮೈಸೂರಿಗೆ ಬಂದು ಹೋದ. ಇಲ್ಲೇ ಲಗ್ನ ಮಾಡಿಕೊಂಡ. ಅಷ್ಟರಲ್ಲಿ ಸೂಫಿಯವರು ಮಾಡಿದ ಸಾಲ ತೀರದಾಯಿತು. ಮನೆ ಕೈ ಬಿಡುವ ಸ್ಥಿತಿ ಬಂದಿತು. ಅದು ಭೋಗ್ಯಕ್ಕೆ ತುತ್ತಾಯಿತು. ಬಾಡಿಗೆ ಮನೆಯಲ್ಲಿ ವಾಸ. ಅಲ್ಲೇ ಸ್ವತಂತ್ರವಾಗಿ ರಾಷ್ಟ್ರೀಯ ಕಲಾ ಶಾಲೆಯೊಂದನ್ನು ಖಾಸಗಿಯಾಗಿ ತೆರೆದರು. ಮಂಡಿ ಮೊಹಲ್ಲಾದ ಈ ಕಿರಿದಾದ ಮನೆಯ ಕೆಳಗಡೆ ವಾಸ. ಮಹಡಿ ಹಜಾರದಲ್ಲಿ ಕಲಾ ತರಗತಿ. ಹತ್ತಾರು ಜನ ವಿದ್ಯಾರ್ಥಿಗಳಿಗೆ ಚಿತ್ರ ಕಲಾಭ್ಯಾಸ ಕಲಿಸಲು ಪ್ರಾರಂಭಿಸಿಬಿಟ್ಟರು. ಸಂಸಾರನೌಖೆ ಸಾಗಿಸಲು, ಮನೆ ಬಾಡಿಗೆ ತೂಗಿಸಲು ಕಷ್ಟ ಪಡುವ ಸ್ಥಿತಿ ಬಂದಿತು. ಹಾಗೂ ಹೀಗೂ ಕಲಾ ಶಾಲೆ ತೆವಳಿಕೊಂಡು ಸಾಗಿತು.

೧೯೭೬ ಸುಮಾರಿನಲ್ಲಿ ಒಮ್ಮೆ ಡಿ.ಜಿ.ಎಸ್. ಶೆಣೈ ಉಡುಪಿಯಿಂದ ಮೈಸೂರಿಗೆ ಬಂದಿದ್ದರು. ನಾವಿಬ್ಬರು ಸೂಫಿಯವರ ಈ ಶಾಲೆಗೆ ಹೋದೆವು. ಕಲಾಶಾಲೆಗೆ ಅಗತ್ಯವಾದ

ಸಲಕರಣೆ ಅಷ್ಟಾಗಿ ಅಲ್ಲಿರಲಿಲ್ಲ. ಕತ್ತಲ ವಾತಾವರಣ. ಇದನ್ನು ಗಮನಿಸಿದ ಶೆಣೈ ಒಂದೆರಡು ಟ್ಯೂಬ್‌ಲೈಟ್‌ಗಳನ್ನು ತರಿಸಿ ಬೆಳಕು ಬರುವಂತೆ ಮಾಡಿದರು. ಈ ಶಿಷ್ಯರ ಉದಾರತೆ ಹಾಗೂ ಪ್ರೀತಿಯನ್ನು ಕಂಡ ಸೂಫಿ ಮನದಲ್ಲೇ ಸಂತೋಷಪಟ್ಟರು. ತುಂಬು ಹೃದಯದಿಂದ ಹರಸಿದರು.

ಸೂಫಿಯವರು ಯಾರ ಮನಸ್ಸನ್ನು ನೋಯಿಸಿದವರಲ್ಲ. ಒಂದು ಸಂಗತಿ ನೆನಪಾಗುತ್ತದೆ. ಸೂಫಿಯವರ ಕಲಾಶಾಲೆ ಹಾಗೂ ವಾಸದ ಮನೆ ಒಂದೇ ಕಡೆ. ಅದರ ಬಾಡಿಗೆ ಕಟ್ಟಲು ಕಷ್ಟವಾಗುತ್ತಿತ್ತು. ಇಲ್ಲಿ ಎರಡು ವರ್ಷಗಳ ಕಾಲ ನಿಭಾಯಿಸಿದ್ದಾಯಿತು. ಮನೆಯನ್ನು ಖಾಲಿ ಮಾಡಬೇಕೆಂಬ ಮನೆ ಮಾಲೀಕನ ಒತ್ತಾಯ ಮೇಲಿಂದ ಮೇಲೆ ಒಂದು ತಿಂಗಳ ಅವಧಿ ಪಡೆದುಕೊಂಡರು. ಅವಧಿಗೆ ಸರಿಯಾಗಿ ಮನೆಯನ್ನು ಖಾಲಿ ಮಾಡಿಬಿಟ್ಟರು. ಮನೆಯ ಬಾಗಿಲಿಗೆ ಒಂದು ಚೀಟಿಯನ್ನು ಅಂಟಿಸಿದರು. ಅದರಲ್ಲಿ ಮನೆ ಮಾಲೀಕನಿಗೆ ಬರೆದರು. "ನಿಮಗೆ ಮಾತು ಕೊಟ್ಟಂತೆ ಈ ದಿವಸ ಮನೆ ಖಾಲಿ ಮಾಡುತ್ತಿದ್ದೇನೆ. ನೀವು ಸುಖವಾಗಿ ಬಾಳಿ ವಂದನೆಗಳು" ಎಂಬ ಒಕ್ಕಣೆ ಓದಿದ ಮನೆ ಮಾಲೀಕನ ಹೃದಯ ಕರಗಿತು. ಕಣ್ಣುಗಳು ತೇವಗೊಂಡವು. ಎಂಥ ಕಲ್ಲು ಹೃದಯವನ್ನು ಕರಗಿಸುವಂಥ ದೊಡ್ಡ ಗುಣ ಸೂಫಿ ಸಾಹೇಬರದಾಗಿತ್ತು.

ಸೂಫಿಯವರ ಸಹನೆಗೆ ಒಂದು ಉದಾಹರಣೆ ಕೊಡುವುದು ಉಚಿತವೆನಿಸುತ್ತದೆ. ಸೂಫಿಯವರ ಜೊತೆ ನಾವು ಕನ್ನಡ ನಾಡಿನ ಕಲಾವಿದರು ದೆಹಲಿಗೆ ೧೯೮೫ರಲ್ಲಿ ಹೋಗಿ ಬಂದ ಸಂದರ್ಭ ನಾನೆಂದು ಮರೆಯಲಾರೆ. ದೆಹಲಿಯ ಆಲ್ ಇಂಡಿಯಾ ಫೈನ್ ಆರ್ಟ್ಸ್ ಸೊಸೈಟಿ ಭಾರತದ ಅನೇಕ ಕಲಾವಿದರನ್ನು ಸನ್ಮಾನಿಸುವ ಸಮಾರಂಭ. ಕರ್ನಾಟಕದಿಂದ ಸುಮಾರು ೨೦ ಜನ ಕಲಾವಿದರಲ್ಲಿ ಸೂಫಿ, ನಾನು, ಮಧುಗಿರಿ ರಾಮು, ಮ.ಈ. ಗುರು, ರಾಮನರಸಯ್ಯ, ಕಾಳಪ್ಪ, ಸಾಲಿ, ರಘೋತ್ತಮ ಪುಟ್ಟಿ, ವಿಷ್ಣುದಾಸ್, ರಾಮದಾಸ್, ಎಂ.ಎ. ಚೆಟ್ಟಿ ಮೊದಲಾದವರು ಇದ್ದೆವು. ಆ ದಿನ ಕೇಂದ್ರ ಮಂತ್ರಿ ರಾಮನಿವಾಸ್ ಮಿರ್ದಾ ನಮ್ಮೆಲ್ಲರಿಗೂ ಸನ್ಮಾನ ಹಾಗೂ ಔತಣವಿತ್ತರು.

ನಾನು, ಗುರು, ರಾಮು, ಸೂಫಿ ಅವರು ತಂಗಿದ್ದು ಯೂತ್ ಹಾಸ್ಟೆಲಿನಲ್ಲಿ. ನಾವು ದೆಹಲಿಯಲ್ಲಿ ನೋಡಿದ ಕೆಂಪು ಕೋಟೆ, ಚಾಂದಿನಿ ಚೌಕ, ಕನಾಟ್ ಪ್ಲೇಸ್, ಕರೋಲ್ ಭಾಗ್, ಕುತಬ್ ಮೀನಾರ್, ಸಂದರ್ಶಿಸಿದ ಆಗ್ರ ಮೊದಲಾದ ಪ್ರೇಕ್ಷಣೀಯ ಸ್ಥಳಗಳು ಸುತ್ತಿದ ಪೇಟೆಗಳು ತಿಂದು ಸವಿದ ತಿನಿಸುಗಳು ಒಂದೊಂದು ನೆನಪಿನಾಳದಿಂದ ಹೊರಬರುತ್ತಿವೆ.

ಸೂಫಿಯವರೊಡನೆ ನಾವು ಕಳೆದ ಮಧುರ ರಸಗಳಿಗೆಗಳು ಮತ್ತೆ ಬರವು. ಅವರ ಮಾತಿನ ನಡುವೆ ಬರುತ್ತಿದ್ದ, ಹಿತವಚನ, ಗಾದೆ ಮಾತುಗಳು, ಒಬ್ಬ ಯೋಗಿಪುರುಷನಿಂದ ಬರುವಂತೆ ಭಾಸವಾಗುತ್ತಿತ್ತು. ಅವರ ಹಾಸ್ಯದ ಚಟಾಕಿಯ ನುಡಿಗಳು, ಅವರು ನಡೆದುಕೊಂಡ ರೀತಿ, ಅವರ ಅಪರಿಮಿತ ತಾಳ್ಮೆ ಹೆಮ್ಮೆಪಡುವಂತಹುದು.

"ಸೂಫಿ ನಿನ್ನನ್ನು ಶಿವನ ಹತ್ತಿರ ಕಳುಹಿಸುತ್ತಿದ್ದೇವೆ" ಎಂದು ಓರ್ವ ಕಲಾವಿದನೊಬ್ಬ ಸಿಟ್ಟಿನಿಂದ ಹೇಳಿದಾಗಲೂ ಸೂಫಿಯವರು ಶಾಂತ ಚಿತ್ತರಾಗಿ, "ಆ ಹುಚ್ಚನ ಮಾತಿಗೆ ನಗು ಬಂತು ಆದರೆ ಅಷ್ಟೇ ನೋವಾಯಿತು. ಏನೇ ಬರಲಿ ಅದು ಶಿವ ಕೊಟ್ಟಿದ್ದು



ಎಂದು ಭಾವಿಸಿ ತಾವು ಅದನ್ನೇ ಪಡೆಯಲು ಪ್ರಯತ್ನಿಸಬೇಕು" ಎಂದು ಒಮ್ಮೆ ಒಂದು ಕಡೆ (೧೬-೧-೮೫ರಲ್ಲಿ) ಬರೆದಿದ್ದಾರೆ. ಸೂಫಿಯವರಿಗೆ ಘನ ಸರ್ಕಾರ ೫೦೦ ರೂ.ಗಳ ಧನ ಮಂಜೂರಾದ ಸಂದರ್ಭದಲ್ಲಿ ಅಷ್ಟು ಬಾರದ ಒಬ್ಬರು ನಿರಾಶೆಗೊಂಡು ಮಾತಾಡಿದ್ದು ದುಡುಕುತನದ್ದು ಅನಿಸಿತು. ಸೂಫಿಯವರು ಅಂತಹವರ ಬಗ್ಗೆಯೂ ಪ್ರೀತಿ ವಿಶ್ವಾಸ ಇರಿಸಿಕೊಂಡಿದ್ದವರು. ಅಂತಹವರನ್ನು ನಾಚುವಂತೆ ನಡೆದುಕೊಂಡವರು. ಮೇಲಿನ ಎರಡು ಸಂಗತಿಗಳೇ ಸಾಕು. ಸೂಫಿಯವರ ಶಾಂತ ಸ್ವಭಾವವನ್ನು ವ್ಯಕ್ತಪಡಿಸಲು.

ಮೈಸೂರಿನ ಅನೇಕ ಸಂಘ ಸಂಸ್ಥೆಗಳು ಜೊತೆ ಅವರು ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದರು. ದಸರಾ ವಸ್ತು ಪ್ರದರ್ಶನದ ಕಲಾ ವಿಭಾಗದಲ್ಲಿ ೧೦ ವರ್ಷಗಳ ಕಾಲ ನನ್ನ ಜೊತೆ ಅವರು ಸದಸ್ಯರಾಗಿ ಮಾರ್ಗದರ್ಶನ ನೀಡಿದ್ದರು. "ತಾವು ಹಿರಿಯ ಇವ ಕಿರಿಯ" ಎಂಬ ಭಾವನೆ ಅವರಲ್ಲಿ ಎಂದೂ ನಾನು ಕಾಣಲಿಲ್ಲ. ಒಳ್ಳೆಯದನ್ನು ಮೆಚ್ಚುವ ಅಪರೂಪದ ಗುಣ ಅವರದಾಗಿತ್ತು. ಇತರರ ಪ್ರಗತಿಯನ್ನು ಕಂಡು ಕರುಬುತ್ತಿರಲಿಲ್ಲ. "ಅಪಪ್ರಚಾರ ನಿಂದನೆಗೆ ಕಿವಿ ಕೊಡಬೇಡಿ. ಹೊಗಳಿಕೆಗೆ ತೆಗಳಿಕೆಗೆ ಮಾರು ಹೋಗಬೇಡಿ. ಕಲಾವಿದರಿಗೆ ತಮ್ಮ ಕೈಲಾದುದನ್ನು ಮಾಡಿ ಅದೊಂದೇ ಶಿವಾ ಮೆಚ್ಚುವನು ನಾವು ಎಷ್ಟು ಕಾಲ ಬದುಕುತ್ತೇವೆ" ಎಂದು ನನ್ನನ್ನು ಎಚ್ಚರಿಸಿ ಹಿತವಚನ ನೀಡುತ್ತಿದ್ದರು. ಅವರು ಅಜಾತಶತ್ರುಗಳಾಗಿದ್ದರು. ಇವರನ್ನು ಕಂಡರೆ ಕರುಬುವವರು ಒಬ್ಬಿಬ್ಬರು ಇದ್ದರು. ಆದರೆ ಸೂಫಿ ಅದೆಲ್ಲವನ್ನು ನುಂಗಿಕೊಂಡು ಬಂದಿದ್ದರು. ಸೂಫಿಯವರದು ಬಿಚ್ಚು ನುಡಿ ಚುಚ್ಚುನುಡಿಗಳಾರಗಿರಲಿಲ್ಲ. "ಅಯ್ಯಾ ಹುಚ್ಚಪ್ಪ" ಎಂದೇ ಯಾರನ್ನು ಪ್ರಾರಂಭಿಸಿ ಮಾತನಾಡುತ್ತಿದ್ದರು. ಸರ್ಕಾರ, ಅಕಾಡೆಮಿ ಇವರನ್ನು ಗುರುತಿಸುವಲ್ಲಿ ತಡಮಾಡಿತು. ಇದಕ್ಕೂ ಬೇಸರಗೊಳ್ಳಲಿಲ್ಲ. ಅಸೂಯೆ ಆಕ್ರೋಶಗೊಳ್ಳಲಿಲ್ಲ. ಶಾಂತಚಿತ್ತರಾಗಿ ಎಲ್ಲವನ್ನು ಜಯಿಸಿದರು. ನಾನು ವಾಸವಾಗಿದ್ದ ರಾಮವಿಲಾಸದ ನಿವಾಸ ಅವರು ವಾಸವಾಗಿರುವ ಮಂಡಿ ಮೊಹಲ್ಲಾದ ನಿವಾಸದ ಹಾದಿ ನಮ್ಮ ಓಡಾಟದಲ್ಲಿ ಅದೇಷ್ಟು ಸವೆದಿದೆಯೋ. ಅವರನ್ನು ನೋಡದಿದ್ದರೆ ಅವರ ಜೊತೆ ಚಾ ಗುಟಕದಿದ್ದರೆ ಏನನ್ನೋ ಕಳೆದುಕೊಂಡಷ್ಟು ಭಾಸವಾಗುತ್ತಿತ್ತು. ನಮ್ಮಿಬ್ಬರ ಮಧುರ ಸ್ನೇಹ ಆತ್ಮೀಯತೆ ಒಡಹುಟ್ಟಿದವರಷ್ಟು ಬೆಸೆದುಕೊಂಡಿತ್ತು.

ಸೂಫಿ ಅವರು ತಮ್ಮ ನಿವೃತ್ತಿ ಜೀವನದಲ್ಲಿ ಪ್ರವಾಸ ಮಾಡಿದ್ದೇ ಕಡಿಮೆ. ಮೈಸೂರಿನಲ್ಲಿ ತಮ್ಮ ಕಲಾಶಾಲೆಯ ವಿದ್ಯಾರ್ಥಿಗಳೊಂದಿಗೆ ಕರಾವಳಿ ಪ್ರವಾಸ ಇಟ್ಟುಕೊಂಡಿದ್ದರು. ಧರ್ಮಸ್ಥಳದ ಮಾರ್ಗವಾಗಿ ಮಂಗಳೂರಿಗೆ ಬರಲು ಸೂಫಿ ಅವರ ಮಿತ್ರ ಬಿ.ಜಿ. ಮಹಮ್ಮದರಿಂದ ಆಹ್ವಾನ ಬಂದಿತ್ತು. ಈ ಸಂದರ್ಭದಲ್ಲಿ ಬಿ.ಜೆ.ಎಂ. ಆರ್ಟ್ ಕಲಾಶಾಲಾವತಿಯಿಂದ ಮಹಮ್ಮದರು ಸನ್ಮಾನಿಸುವ ಏರ್ಪಾಟು ನಡೆಯಿತು. ಉಡುಪಿಯಲ್ಲೂ ಶೃಂಗಾರ ಆರ್ಟ್ ಗ್ಯಾಲರಿಯ ದಿ. ಜಿ. ಎಸ್. ಶೆಣೈ ಅವರು ಶ್ರೀಮತಿ ಮನೋರಮಾ ಮಧ್ವರಾಜ್ ಅವರ ಅಧ್ಯಕ್ಷತೆಯಲ್ಲಿ ಸೂಫಿ ಅವರನ್ನು ಸನ್ಮಾನಿಸಿದರು.

ಈ ಸಂದರ್ಭದಲ್ಲಿ ತಮ್ಮ ಕಲಾಗುರುವನ್ನು ಬಿ.ಜಿ. ಮಹಮ್ಮದರ ಪತ್ನಿ ಮಂಗಳೂರಿನ ತಮ್ಮ ನಿವಾಸದಲ್ಲಿ ಹತ್ತಾರು ದಿನಗಳ ಕಾಲ ತಂಗುವಂತೆ ಮಾಡಿದರು. ಇಲ್ಲಿ ಅವರು ಕಳೆದ ವೇಳೆ ಮರೆಯಲಾರದಂಥವು. ಅವರು ಮನೆಯ ಹೊರಗಿನ ಹಜಾರದಲ್ಲಿ

ಮಲಗುತ್ತಿದ್ದರು. ರಾತ್ರಿ ಮಲಗುವ ಮುಂಚೆ ತಮ್ಮ ಪಕ್ಕದಲ್ಲಿ ಕ್ಯಾನುವಾಸು ಬಣ್ಣ ಬ್ರಷ್ ಇಟ್ಟುಕೊಳ್ಳುತ್ತಿದ್ದರು. ಬೆಳಗಿನ ಹೊತ್ತಿಗೆ ಮೀನಿನ ಚಿತ್ರ ಸಿದ್ಧವಾಗಿರುತ್ತಿತ್ತು. ಸೂಫಿ ಅವರ ಮಿತ್ರ ದಂಪತಿಗಳು ನೋಡಿ ಅಚ್ಚರಿಗೊಂಡರು. ಸೂಫಿ ಸುಮ್ಮನೆ ಕೂರುವ ಸ್ವಭಾವದವರಾಗಲಿಲ್ಲ. ಕಾಡು ಹರಟೆಯಲ್ಲಿ ಕಾಲ ಕಳೆಯುತ್ತಿರಲಿಲ್ಲ. ಬಿ.ಜೆ.ಎಂ. ಕಲಾಶಾಲೆಯಲ್ಲೂ ಕಲಾವಿದ್ಯಾರ್ಥಿಗಳ ಮುಂದೆ ಕುಳಿತು ಚಿತ್ರ ಬಿಡಿಸಿ ಅವರಲ್ಲಿ ಸ್ಫೂರ್ತಿ ಮೂಡುವಂತೆ ಪ್ರೇರೇಪಿಸುತ್ತಿದ್ದರು.

ಮಹಮ್ಮದರ ಜೊತೆ ಅವರು ಅಲ್ಲಿ ಇದ್ದಷ್ಟು ದಿನ ಪ್ರತಿ ದಿನವೂ ಬೆಳಗಿನ ವೇಳೆ ಅಷ್ಟು ದೂರ ಹೋಗಿಬರುತ್ತಿದ್ದರು. ಮುಖ ಶುಚಿ ಮಾಡಿಕೊಂಡು ನಮಾಜ್ ಮಾಡುತ್ತಿದ್ದರು. ನಂತರ ಮಿತ್ರರೊಡನೆ ಉಪಹಾರ. ಅದೂ ಅಲ್ಪಪ್ರಮಾಣದಲ್ಲಿ. ಪೆನ್ಸಿಲ್ ಆಯ್ತು ಪುಸ್ತಕ ಆಯ್ತು. ತೋಚಿದಷ್ಟು ರೇಖಾಚಿತ್ರ ಬಿಡಿಸುವುದು. ಮೌನತಾಳಿ ಕೂರುವುದು. ಶಾಂತಚಿತ್ತರಾಗಿ ದಿಗಂತದತ್ತ ನೋಡುವುದು. ಮಾತಿಗೆ ತಕ್ಕಷ್ಟು ಉತ್ತರ. ದಿನಕ್ಕೆ ಐದು ಸಾರಿ ನಮಾಜ್ ಮಾಡುವುದನ್ನು ಎಂದೂ ಮರೆತವರಲ್ಲ. ಊಟಕ್ಕೆ ಕುಳಿತಾಗ ಐದು ನಿಮಿಷ ಮೌನವಾಗಿದ್ದು ಏನನ್ನೋ ಗೊಣಗುತ್ತಿದ್ದರು. ಅದೇನೆಂದು ಕೇಳಿದವರಿಗೆ "ದರೋದ್" ಎಂಬ ಮಂತ್ರ ಅದು ಎನ್ನುತ್ತಿದ್ದರು. ಊಟಕ್ಕೆ ಮುಂಚೆ ಹೇಳುವಂತಹುದು. ಹಾಗೇ ಮಾಡಿದರೆ ತೆಗೆದುಕೊಂಡ ಆಹಾರ ಶುದ್ಧವಾಗಿ ದೇಹಕ್ಕೆ ಸೇರುತ್ತದೆ. ಈ ಮಂತ್ರ ತಮ್ಮ ತಾತ ಮುತ್ತಾತಂದಿರಿಂದ ಬಂದಿದೆ ಎನ್ನುತ್ತಿದ್ದರಂತೆ.

ಬಯಲುಸೀಮೆಯಿಂದ ಕರಾವಳಿ ಕಡಲ ತೀರದ ಮಂಗಳೂರಿಗೆ ಬಂದ ತಮ್ಮ ಗುರುವಿಗೆ ಸಮುದ್ರ ದರ್ಶನ ಮಾಡಿಸುವ ಆಸೆ ಬಿ.ಜೆ. ಮಹಮ್ಮದರು ಮತ್ತು ಅವರ ಪತ್ನಿಗೆ ಒಮ್ಮೆ ಉಂಟಾಯಿತು. ಎಲ್ಲರೂ ದೋಣಿಯಲ್ಲಿ ನೇತ್ರಾವತಿ ನದಿ ದಾಟಿ ಬೆಂಗರೆಯ ಸಮುದ್ರ ತೀರಕ್ಕೆ ತಲುಪಬೇಕಿತ್ತು. ದೋಣಿಯ ಕುಲುಕಾಟಕ್ಕೆ ಸೂಫಿ ತುಂಬಾ ಹೆದರಿದರು. ಮಹಮ್ಮದರು, ಅವರ ಪತ್ನಿ ಹಿರಿಯ ಪುತ್ರ ಶಬೀರ್ ಅಲಿ, ಕಲಾಶಾಲೆಯ ಮಕ್ಕಳು ಅವರ ಜೊತೆಗಿದ್ದರು. "ಸಮುದ್ರದ ವಿವಿಧ ಭಂಗಿ, ತೆರೆಗೆ ಆರ್ಭಟ ನೋಡೋಣ ಸಂತೋಷ ಪಡೋಣ, ಸಮುದ್ರದಲ್ಲಿ ಕಾಲು ಹಾಕಿ ಸಾಯುವುದು ಬೇಡ" ಎನ್ನುತ್ತಿದ್ದರಂತೆ ಸೂಫಿ ಮಾಸ್ತರು. ಅವರು ಮಹಮ್ಮದರ ಸಂಸಾರದಲ್ಲಿ ಒಬ್ಬ ಹಿರಿಯ ವ್ಯಕ್ತಿಯಾಗಿ, ಅಜ್ಜನಂತೆ ಕಾಣುತ್ತಿದ್ದರು. "ಸೂಫಿ ಅವರು ನನ್ನ ಗುರುಗಳು, ನನ್ನನ್ನು ಕಾಲವಿದ ಮಹಮ್ಮದರೊಡನೆ ಲಗ್ನ ಮಾಡಿಸಿ ನಮ್ಮ ಜೀವನ ಸುಖಮಯವನ್ನಾಗಿ ಮಾಡಿದ್ದನ್ನು ಎಂದೂ ಮರೆಯಲಾರೆವು" ಎನ್ನುತ್ತಾರೆ ಅಸ್ತರ್ ಬೇಗಂ. ಮಂಗಳೂರಿನ ಅನೇಕ ವಿದ್ಯಾರ್ಥಿಗಳು ಸೂಫಿ ಅವರ ಶಿಷ್ಯರಾಗಿ ಮುಂದುವರಿದುದನ್ನು ಈ ದಂಪತಿಗಳು ನೆನಪಿಸಿಕೊಳ್ಳುತ್ತಾರೆ. ಸೂಫಿ ಅವರ ಚಿತ್ರಕಲೆಗೆ ಮಾರು ಹೋದವರಲ್ಲಿ ಈ ದಂಪತಿಗಳೂ ಪ್ರಮುಖರು.

ಸೂಫಿ ಅವರ ಕಾಲಶೈಲಿ ಪಾಶ್ಚಾತ್ಯ ಅಭ್ಯಾಸದಿಂದ ಬಂದುದು. ಜೆ.ಜೆ. ಕಾಲಶಾಲೆಯ ಅಂದಿನ ಕಲಿಕೆಯೂ ಅದೇ ಆಗಿತ್ತು. ಪಾಶ್ಚಾತ್ಯ ಕಲಾ ಶೈಲಿಯ ಚೌಕಟ್ಟಿನಲ್ಲೇ ಸಿದ್ಧವಾದ ಚಿತ್ರಗಳೂ ಸೂಫಿ ಅವರಲ್ಲೂ ಕಾಣಬರುತ್ತವೆ. ಸಂಯೋಜನೆಯ ಹಲವು ಮುಖಗಳನ್ನು ಎತ್ತಿ ತೋರಿಸುವಂಥವು. ವ್ಯಕ್ತಿಗಳನ್ನು ನಿಸರ್ಗದ ಹಿನ್ನೆಲೆಯಲ್ಲಿ ಮೃಗ ಪಕ್ಷಿಗಳನ್ನು

ಬೆಳೆದ ಕುಂಚದಲ್ಲಿ ಸೆರೆ ಹಿಡಿದಿದ್ದಾರೆ. ಜಲವರ್ಣ ಹಾಗೂ ತೈಲವರ್ಣಗಳ ಮಾಧ್ಯಮದ ಇವರ ಚಿತ್ರಗಳಲ್ಲಿ ಕೆಲವು ಇವರಿಗೆ ಹೆಸರು ತಂದುಕೊಂಟ್ಟಿವೆ.

ಅವುಗಳಲ್ಲಿ ಜಿಪ್ಸಿ ಕುಕ್ಕರ್, ದಿ ರೆಸ್ಟ್, ಆನ್ ದಿ ಅಲರ್ಟ್, ಬ್ಲೂ ಪೀಕಾಕ್, ಜಂಗಲ್ ಗರ್ಲ್ ಮುಂತಾದ ಚಿತ್ರಗಳು ವರ್ಣ ವಿನ್ಯಾಸ, ಬೆಳಕು ಕತ್ತಲು, ಗಾಳಿ ವಾತಾವರಣ, ದಿಗಂತದ ಸ್ವಚ್ಛ ಛಾಯೆ – ಎಲ್ಲ ದೃಷ್ಟಿಯಲ್ಲೂ ಸೂಫಿಯವರ ಚಿತ್ರಗಳು ಉನ್ನತ ಮಟ್ಟದಲ್ಲಿವೆ. ದುರಂತವೆಂದರೆ ಈ ಎಲ್ಲವೂ ಮಾರಾಟವಾಗಿವೆ. ಎಲ್ಲಿವೆ ಎಂಬುದೇ ತಿಳಿಯದಾಗಿದೆ. ಆದರೆ ಅವುಗಳ ಛಾಯಚಿತ್ರಗಳು ದೊರೆತಿದ್ದವು. ಸೂಫಿ ಅವರ ಶಿಷ್ಯರಲ್ಲಿ ಒಬ್ಬರಾಗಿದ್ದ ದಿ.ಜಿ.ಎಸ್. ಶೆಣೈ ಅವರು ತಮ್ಮ ಕ್ಯಾಮರಾದಿಂದ ಅವುಗಳನ್ನು ಸೆರೆಹಿಡಿದಿದ್ದರು. ಅವುಗಳನ್ನು ಸಂಗ್ರಹಿಸಿ ಬಹುಪಾಲು ನನ್ನ ಲೇಖನದ ಜೊತೆ ಉದಯವಾಣಿಯಲ್ಲಿ ಸೂಫಿಯವರ ಬಗ್ಗೆ "ಮೃಗ ಪಕ್ಷಿಗಳ ಬೆಡಗು ಬಿನ್ನಾಣವನ್ನು ಮೂಡಿಸಬಲ್ಲ ಎಫ್.ಎಂ. ಸೂಫಿ" ಎಂದು ದಿನಾಂಕ ೧೯–೧೨–೭೬ರಲ್ಲಿ ಪ್ರಕಟಿಸಿದುದು ಒಂದು ಸಮಾಧಾನದ ಸಂಗತಿ. ಆ ಎಲ್ಲ ಚಿತ್ರಗಳನ್ನು ನಾನು ನೋಡಿದ್ದೇನೆ. ಅವುಗಳ ಬಗ್ಗೆ ಕಿರು ವಿಮರ್ಶೆ ಮಾಡಿದೆ. ಅದನ್ನು ಇಲ್ಲಿ ಕೊಡಬಯಸುತ್ತೇನೆ.

**ಡಿಜಿಪ್ಸಿಕುಕ್** ಎಂಬೀ ಚಿತ್ರದಲ್ಲಿ ಓರ್ವ ತಿರುಪೆ ಹೆಂಗಸು ಊರಿಂದ ಊರಿಗೆ ನಡೆದು ಬಂದು ಬೇಸತ್ತು ಅಡಿಗೆ ಕೆಲಸದಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ. ಆಕೆಯ ಸುತ್ತಾಮುತ್ತಾ ಅಂದಕಾರದ ಬಟ್ಟ ಬಯಲು. ಅಡಿಗೆಯ ಒಲೆಯ ಬೆಂಕಿಯಿಂದ ಬರುವ ನಸು ಮಬ್ಬು ಬೆಳಕು ಆಕೆಯ ಬಾಡಿದ ಮುಖವನ್ನು ಸ್ಪಷ್ಟವಾಗಿ ತೋರಿಸುತ್ತದೆ. ಆಕೆ ಉಟ್ಟಿರುವ ಚಿಂದಿ ಬಟ್ಟೆ ಉಪಯೋಗಿಸಿರುವ ಅಡುಗೆಯ ಮರುಕು ಮಣ್ಣಿನ ಮಡಿಕೆ ಮತ್ತು ತುಸು ಅನ್ನ ಎಲ್ಲವನ್ನು ಸ್ವಾಭಾವಿಕ ಬಣ್ಣಗಳಲ್ಲಿ – ಒಂದು ವಿಸ್ಮಯವೇ ಸರಿ. ಬೆಂಕಿಯಲ್ಲಿ ಕಂಡು ಬರುವ ವಿವಿಧ ಬಣ್ಣಗಳು ಪ್ರಕೃತಿ ಸಿದ್ಧವಾದವುಗಳಾಗಿವೆ. ಇಂತಹ ಚಿತ್ರ ಮಧ್ಯ ಪ್ರಾಂತ್ಯದ ಕಲಾಪ್ರೇಮಿ ಒಬ್ಬರನ್ನು ಬಹುವಾಗಿ ಆಕರ್ಷಿಸಿತು. ಅಷ್ಟೇ ಅಲ್ಲಾ ಅದು ಅವರ ಮನೆಯ ದಿವ್ಯ ಅಲಂಕಾರ ಸಾಧನವಾಯಿತು.

**ದಿ ಅಲರ್ಟ್** ಎಂಬ ಚಿತ್ರ ಭಯಂಕರ ಸನ್ನಿವೇಶವನ್ನು ತೋರಿಸುವ ಜಲವರ್ಣ ಚಿತ್ರ, ಆದರೂ ಒಂದು ರಮ್ಯವಾದ ಅಗಾಧತೆಯಿಂದ ಕೂಡಿದೆ. ಕಗ್ಗತ್ತಲೆಯ ದಟ್ಟವಾದ ಕಾಡಿನಲ್ಲಿ ಸೂರ್ಯನ ಸೂಕ್ಷ್ಮ ಕಿರಣಗಳು ಯಾವ ಸಂದಿನಿಂದಲೂ ತೂರಿ ಬಂದು ನೀಳವಾಗಿ ನಿಂತ ನೀರಿನ ಮೇಲೂ ದಾಹದ ಬಾಧೆಯಿಂದ ಬಳಲಿ ನೀರು ಕುಡಿಯಲು ಕಾತುರತೆಯಿಂದ ಬಂದ ಚಿರತೆಯಲ್ಲಿ ಕಂಡು ಬರುವ ಭಯೋತ್ಪಾದಿತ ಭಾವನೆಗಳು ಮತ್ತು ಸಹಜ ವರ್ಣಗಳ ಸೃಷ್ಟಿಯೂ ಕಲಾಮಯವಾಗಿದೆ. ಚಿರತೆಯ ಪ್ರತಿಬಿಂಬವು ನಿಂತ ನೀರಿನಲ್ಲಿ ಅಚ್ಚಳಿಯದೆ ಕಾಣುವ ಸ್ವರೂಪ ಸ್ವಾಭಾವಿಕವಾಗಿವೆ. ಇಂಥ ಅಪ್ರತಿಮ ಚಿತ್ರ ಹೈದರಾಬಾದಿನ ಶ್ರೀಮಂತರೊಬ್ಬರ ಭವ್ಯ ಮನೆಯ ಭಿತ್ತಿಯ ಮೇಲೆ ರಾರಾಜಿಸುತ್ತಿದೆ.

**ದಿ ರೆಸ್ಟ್** ಎಂಬುದರಲ್ಲಿ ಬಿಳಿದಾದ ಒಂದು ಜೊತೆ ನವಿಲುಗಳು ತಮ್ಮ ಪುಕ್ಕಗಳನ್ನು ಕೆದರಿಕೊಂಡು ಲವಲವಿಕೆಯಿಂದ ವಿಶ್ರಾಂತಿಯನ್ನು ಪಡೆಯುವವೋ ಎನ್ನುವಂತಹ ಚಿತ್ರ ಈ ನವಿಲುಗಳು ಒಂದು ಇನ್ನೊಂದನ್ನು ಪ್ರೇಮ ದೃಷ್ಟಿಯಿಂದ ನೋಡುವ ನೋಟವನ್ನು ಸೂಚಿಸುವಂತಿವೆ. ಅವುಗಳ ಅಂಗಾಂಗಗಳ ಸೊಗಸು ಬೆಡಗು ಬಿನ್ನಾಣ ಎಲ್ಲವೂ

ಪ್ರೇಮಪೂರಿತ ಚಿಹ್ನೆಯಾಗಿ ಬೀರುವಂತಿವೆ. ಉದ್ಯಾನವನದಲ್ಲಿ ಕಂಡು ಬರುವ ಮರಗಳು, ಬಳ್ಳಿ, ಪೊದೆ, ಪುಷ್ಪ, ರಂಬೆ, ಕೊಂಬೆ, ಎಲೆ, ಗರಿ, ಹಣ್ಣು – ಹಸಿರು ಹುಲ್ಲು ಎಲ್ಲವೂ ಸ್ವಾಭಾವಿಕವಾದ ಪ್ರಕೃತಿಯ ಸಹಜ ರಚನೆಯಂತೆ ಇದೆ. ದಿಗಂತವನ್ನು ತೋರುವುದರಲ್ಲೂ ಸೂಫಿಯವರು ತಮ್ಮ ಕುಂಚದ ಸಾಹಸವನ್ನು ತೋರಿಸುತ್ತಾರೆ. ಇಲ್ಲಿ ನವಿಲುಗಳ ಸೃಷ್ಟಿ ನಿಜವಾಗಿಯೂ ಆ ಪ್ರಕೃತಿಯ ಬೆಡಗಿಗೆ ಮನಸೋತಂತೆ ಹರ್ಷ ಪೂರ್ಣವಾದ ನೋಟವನ್ನು ಬೀರುವ ಬಗ್ಗೆ ಯಾರನ್ನಾದರೂ ಮುಗ್ಧಗೊಳಿಸುವಂತಿದೆ.

ಇದೇ ಮಟ್ಟದ ಇನ್ನೊಂದು ಚಿತ್ರದಲ್ಲಿ ಲಂಬಾಣಿಯೊಬ್ಬಳು ನವಿಲೊಂದನ್ನು ಹಿಡಿದುಕೊಂಡು ಮರದ ನೆರಳನ್ನು ಆಶ್ರಯಿಸಿ ನಿಂತಿರುವ ಗಂಭೀರ ರೀತಿಯನ್ನು ಚಿತ್ರಿಸುವುದರಲ್ಲಿ ಸೂಫಿಯವರು ತಮ್ಮ ಕಲಾ ಪ್ರೌಢಿಮೆಯನ್ನು ವ್ಯಕ್ತಪಡಿಸಿದ್ದಾರೆ. ಅವಳ ಮುಖ ಭಾವ, ಉಡಿಗೆ, ತೊಡಿಗೆ, ಮೈ ಬಣ್ಣ ಸನ್ನಿವೇಶಕ್ಕೆ ತಕ್ಕಂತೆ ಚಿತ್ರವಾಗಿರುವ ಮಾಟವಾಗಿರುವ ಶರೀರ ಮುಂತಾದವುಗಳಲ್ಲಿ ಸೂಫಿಯವರ ಕೈ ಚಳಕವನ್ನು ಗಮನಿಸಬಹುದು. ನಿಬಿಡವಾದ ಕಾನನದ ಹೆಮ್ಮರಗಳ ಸಂದಿನಿಂದ ತೂರಿ ಬಂದ ಹೊಂಗಿರಾಣಗಳು ಆಕೆಯ ಕಾಂತಿಯನ್ನು ಹೆಚ್ಚಿಸುವಂತಿವೆ. ಸೂಫಿಯವರ ಇನ್ನೂ ಕೆಲವು ಚಿತ್ರಗಳು ಎಲ್ಲರ ಮನಸ್ಸನ್ನು ಸೆಳೆದಿವೆ. ಅವುಗಳಲ್ಲಿ 'ನಗ್ನ ಸುಂದರಿ', 'ವನರಾಣಿ', 'ಪ್ರೇಮ ದೃಷ್ಟಿ' ಮುಂತಾದವು.

ನಗ್ನಸುಂದರಿ ಮಹಮದೀಯ ನವ ಯುವತಿಯೋರ್ವಳು ಶಯನ ಗೃಹದಲ್ಲಿ ತನ್ನಿನಿಯನ ಆಗಮನವನ್ನು ನಿರೀಕ್ಷಿಸಿ, ತನ್ನ ಅರೆ ನಗ್ನದ ದೇಹ ಕೃತಿಯನ್ನು ಪ್ರೇಮದಿಂದ ಉನ್ಮತಳಾಗಿ ತನ್ನೆದುರಿನಲ್ಲಿರುವ ಮುಕುರದಿಂದ ಮೈಮರೆತು ಕೂತಿರುವ ಮೋಹಕ ಚಿತ್ರಣ ಕಿಟಕಿಯಿಂದ ತೂರಿ ಬಂದ ಬೆಳಕು ಅವಳ ಸೌಂದರ್ಯವನ್ನು ಹಿಮ್ಮಡಿಗೊಳಿಸುತ್ತದೆ. ಇಂತಹ ಚಿತ್ರವನ್ನು ಊಹಿಸಿದ ಕಲಾವಿದ ಸೂಫಿಯವರಷ್ಟೇ ರಸಿಕರು. ಅದೆಷ್ಟು ನೈಜತೆ ಅವರ ಕುಂಚದಲ್ಲಿ ಅಡಗಿದೆ ಎಂಬುದನ್ನು ಮನಗಾಣಬಹುದಾಗಿದೆ.

**ವನರಾಣಿ** – ಈ ಚಿತ್ರದಲ್ಲಿ ವನರಾಣಿಯೊಬ್ಬಳು ತನ್ನ ಗುಡಿಸಿಲಿನ ಮುಂಬದಿಯ ಕಲ್ಲು ಬಂಡೆಯ ಮೇಲೆ ಕಾಲು ಇಳಿಬಿಟ್ಟು ತನ್ನ ಕೈಗಳಿಂದ ತಾನು ಕುಳಿತಿರುವ ಬಂಡೆಯ ಕೆಳಭಾಗದಲ್ಲಿ ಸರಪಳಿಗಳಿಂದ ಬಿಗಿದಿರುವ ಚಿರತೆಗಳೊಂದಿಗೆ ಚೆನ್ನಾಟವಾಡುವ ಕಾಡುಜನರ ಸ್ವಾಭಾವಿಕತೆ ಇದೆ. ಕೆಣಕಲ್ಪಟ್ಟ ಚಿರತೆಗಳು ಸರಪಳಿ ಕೀಳುವ ರೀತಿಯಲ್ಲಿ ಸಿಟ್ಟೆದ್ದು ಮುನ್ನುಗ್ಗುವುದು. ಆಕೆಯ ದಷ್ಟ ಪುಷ್ಟ ದೇಹಾಕೃತಿ, ಕೈಕಾಲು ತೋಳು ಬಂದಿಗಳು, ಚಿರತೆಯ ಚರ್ಮವನ್ನುಳ್ಳ ಬಾಸಿಂಗವನ್ನು ಮುಡಿದು ಕುಳಿತಿರುವ ಅರೆನಗ್ನ ರೂಪಣಿಯ ಚಿತ್ರ. ಅಷ್ಟೆ ಅಲ್ಲ ಚಿರತೆಯ ಆಕೃತಿ, ಬಣ್ಣ ಎಲ್ಲವೂ ಜೀವ ಕಳೆಯಿಂದ ರಾರಾಜಿಸುತ್ತಿವೆ.

**ಪ್ರೇಮದೃಷ್ಟಿ** – ಈ ಚಿತ್ರದಲ್ಲಿ ಗಂಡು ನವಿಲೊಂದು ಪ್ರೇಮಮಯ ದೃಷ್ಟಿಯನ್ನು ತನ್ನೆದುರಿನಲ್ಲಿ ಹೆಣ್ಣು ನವಿಲಿನಲ್ಲಿ ನೆಟ್ಟು ತನ್ನ ಗರಿಗಳನ್ನು ಚಾಮರವಾಗಿ ಬೀಸಿಕೊಂಡು ನಿಂತಿರುವ ಮೋಹಕತೆಯಿದೆ. ಇವುಗಳ ಸುತ್ತಮುತ್ತಣ ನೆಳಲು ಬೆಳಕಿನಿಂದ ಕೂಡಿದ ನಿಸರ್ಗ ನೋಟ ನಯನ ಮನೋಹರವಾಗಿದೆ. ತೈಲ ವರ್ಣದ ಈ ಚಿತ್ರದಲ್ಲಿ ಸೂಫಿಯವರ ಕುಂಚದ ಓಟವನ್ನು ಬಣ್ಣಗಳ ಪ್ರಖರತೆಯನ್ನು ಮನಗಾಣಬಹುದಾಗಿದೆ. ಮೃಗ ಪಕ್ಷಿಗಳನ್ನು ಸೂಫಿಯವರು ಅದೆಷ್ಟು ಸೊಗಸಾಗಿ ಚಿತ್ರಿಸುತ್ತಿದ್ದರು ಎಂಬುದಕ್ಕೆ ಇನ್ನೊಂದು ಚಿತ್ರ

ಸಾಕ್ಷಿಯಾಗಿದೆ. ಇವರ ಕಲೆಯ ಬೆಲೆಯನ್ನು ಅಳೆಯಲು ಮೇಲಿನ ಕೆಲವು ಕೃತಿಗಳೇ ಸಾಕೆನಿಸುತ್ತವೆ.

ಮೈಸೂರಿನ ವಾಣಿವಿಲಾಸ ಬಡಾವಣೆಯ ವಿದ್ಯಾವರ್ಧಕ ಸಂಸ್ಥೆ ಇಬ್ಬರು ಪ್ರಸಿದ್ಧ ಕಲಾವಿದರಿಂದ ಒಂದು ಚಿತ್ರವನ್ನು ರಚಿಸಲು ಅವಕಾಶ ನೀಡಿತು. ಸೂಫಿ ಹಾಗೂ ನಂಜುಂಡಸ್ವಾಮಿಗಳು ಒಟ್ಟಿಗೆ ಸೇರಿ ಒಂದು ಚಿತ್ರ ರಚಿಸಿದರು. "ಸರಸ್ವತಿ" ಚಿತ್ರ ಅದು ತೈಲ ವರ್ಣದಲ್ಲಿದೆ. ವಿದ್ಯಾಸಂಸ್ಥೆಯ ವರಾಂಡಾದ ಭಿತ್ತಿಯಲ್ಲಿ ಸರಸ್ವತಿಯ ಆಕೃತಿಯನ್ನು ಸ್ವಾಮಿಯವರು ಮತ್ತು ಈ ಸರಸ್ವತಿಗೆ ಹೊಂದಿಕೊಳ್ಳುವಂತೆ ಪ್ರಕೃತಿ ರಮ್ಯವಾದ ಪರಿಸರವನ್ನು ಸೂಫಿಯವರು ಬಹು ಜಾಣ್ಮೆಯಿಂದ ರಚಿಸಿಕೊಟ್ಟರು. ಇಬ್ಬರು ತಮ್ಮ ಕಲಾಕೌಶಲ್ಯವನ್ನು ಇಲ್ಲಿ ಮೆರೆದಿದ್ದಾರೆ. ಒಬ್ಬ ಕಲಾವಿದ ಇನ್ನೊಬ್ಬ ಕಲಾವಿದನ ಬಗ್ಗೆ ಅಷ್ಟೇನೂ ಗೌರವ ಪ್ರೀತಿ ತೋರುವುದಿಲ್ಲ ಎಂಬ ಅಪವಾದದ ಮಾತು ಇದೆ. ಆದರೆ ಇಲ್ಲಿ ಈ ಖ್ಯಾತ ಕಲಾವಿದರಿಬ್ಬರು ಒಂದೇ ಚಿತ್ರ ಪೂರ್ಣಗೊಳಿಸಿ ಸೈ ಎನ್ನಿಸಿದ್ದು ನಿಜಕ್ಕೂ ಅಚ್ಚರಿ ಪಡುವಂಥಹದು. ಇವರಿಬ್ಬರು ಸ್ನೇಹವು ಹಾಲು ಜೇನಿನಂತೆ ಮಧುರವಾಗಿತ್ತು. ಇದಕ್ಕೆ ಸಾಕ್ಷಿಯಾಗಿ ಸರಸ್ವತಿ ಚಿತ್ರ ನಮ್ಮ ಮುಂದೆ ನಿಂತಿದೆ.

**ಕಾಡಿನಲ್ಲಿ ಚಿರತೆ** – ಈ ಚಿತ್ರದಲ್ಲಿ ಕಾಡಿನ ನಡುವೆ ನಿಂತ ನೀರಿಗೆ ಬಾಯೊಡ್ಡಿ ತನ್ನ ದಾಹವನ್ನು ತಣಿಸಿಕೊಳ್ಳುವ ಕಿರು (೧೦" x ೫") ತೈಲ ಚಿತ್ರ ನನ್ನ ಬಳಿ ಇದೆ. ತೆಳುವಾಗಿ ಕತ್ತರಿಸಿ ನಯ ಮಾಡಿದ ಮರದ ಕಾಂಡವನ್ನೇ ಕ್ಯಾನುವಾಸನ್ನಾಗಿ ಬಳಸಿಕೊಳ್ಳಲಾಗಿದೆ. ಕಾಲುಗಳನ್ನು ಮಡಚಿ ನೆಲವನ್ನು ರಾಚಿಕೊಂಡು ತಲೆಬಾಗಿ ನೀರು ಕುಡಿಯಲು ನಾಲಿಗೆ ಚಾಚಿರುವ ಚಿರತೆಯ ಚಿತ್ರ. ನಾಲಿಗೆಯ ಸ್ಪರ್ಷದಿಂದ ನೀರಿನ ಚಲನೆಗೊಂಡಿರುವುದು, ಕೆರೆಯ ದಂಡೆಯಲ್ಲಿನ ಗಿಡಮರಗಳು ದಿಬ್ಬದ ಸಾಲು. ಅವುಗಳ ಮೇಲೆ ಮಬ್ಬು ಕತ್ತಲೆ ನೆಳಲು ಬೆಳಕು, ಹಸಿರು ಮಿಶ್ರ ಹಳದಿ ಬಣ್ಣದ ಗರಿಕೆ, ಈ ಪ್ರಶಾಂತ ವಾತಾವರಣದಲ್ಲಿ ಚಿರತೆ ಯಾವುದೂ ಆತಂಕ ಇಲ್ಲದೇ ನೀರಿಗೆ ಬಂದಿಳಿದಿರುವ ದೃಶ್ಯ ನಯನ ಮನೋಹರವಾಗಿದೆ. ಅಷ್ಟೇ ಭಯಂಕರವಾಗಿದೆ. ನೋಡಿದಾಕ್ಷಣ ಚಿರತೆಯೆಂದು ಗುರುತಿಸಬಹುದಾದ ಮೈಬಣ್ಣ, ನಿಲುವು ಸ್ಪಷ್ಟವಾಗಿದೆ. ಸೂಫಿಯವರ ಕುಂಚ ಕೌಶಲ್ಯವನ್ನು ಈ ಪುಟ್ಟ ಕೃತಿಯಲ್ಲೂ ಕಾಣಬಹುದಾಗಿದೆ.

ಸೂಫಿಯವರ ಏಳು ವರ್ಣ ಚಿತ್ರಗಳು ಮೈಸೂರಿನ ಜಗನ್ಮೋಹನ ಚಿತ್ರಶಾಲೆಯಲ್ಲಿವೆ. ಮೊದಲ ಮಹಡಿಯಲ್ಲಿ ಮೂರು ತೈಲ ಚಿತ್ರಗಳು ಕೆಳ ಹಜಾರದಲ್ಲಿ ನಾಲ್ಕು ಜಲವರ್ಣ ಚಿತ್ರಗಳು ಪ್ರದರ್ಶಿತವಾಗಿವೆ. "ಜಿಪ್ಸಿ ಕುಕ್ಕರ್" ಒಂದು ಚಿತ್ರ ಬಿಟ್ಟರೆ ಉಳಿದವು ವನ್ಯ ಜೀವಿಗೆ ಸೇರಿದ ಚಿತ್ರಗಳಾಗಿವೆ. ಅವುಗಳ ಭೇಟಿಯ ಸೊಗಸನ್ನು ಸಂಪೂರ್ಣವಾಗಿ ಮನಗಂಡವರು ಸೂಫಿಯವರು. ಏಕೆಂದರೆ ಅವರು ಬೇಟೆಯ ಹೃದಯಸ್ಪರ್ಶಿತವಾದ ಸೌಂದರ್ಯವನ್ನು ಸುಂದರವಾಗಿ ಅಷ್ಟೇ ಸಹಜವಾಗಿ ಚಿತ್ರಿಸಬಲ್ಲವರಾಗಿದ್ದರು. ಎಂಬುದಕ್ಕೆ ಇವರು ರಚಿಸಿದ ಚಿರತೆಯ ನವಿಲು ಬೇಟೆ, ಆಹಾರಕ್ಕಾಗಿ ಕಾದು ಕುಳಿತ ಸಿಂಹ, ಅಲೆಮಾರಿ ಹೆಣ್ಣು ಸಿಂಹ, ಹೆಬ್ಬಾವನ್ನು ಕೆಣಕುತ್ತಿರುವ ಹೆಣ್ಣು ಸಿಂಹ, ಮಲಗಿರುವ ಸಿಂಹ, ಕರಡಿಗಳು ಮುಂತಾದ ಈ ಪ್ರಾಣಿಗಳು ಮಿತವಾದ ವರ್ಣಗಳಿಂದ ರಚಿಸಲ್ಪಟ್ಟಿವೆ. ಅಷ್ಟೇ ಶಕ್ತಿಶಾಲಿ ಚಿತ್ರಗಳಾಗಿವೆ.

**ಚಿರತೆಯ ನವಿಲು ಬೇಟೆ:** ಚಿತ್ರದಲ್ಲಿ ಚಿರತೆಯೊಂದು ನವಿಲನ್ನು ಹಿಡಿದು ತಿನ್ನಲು ಬಾಯಿ ಹಾಕಿರುವ ಭಯಾನಕ ಸನ್ನಿವೇಶ ಇಲ್ಲಿ ಮೂಡಿದೆ. ಚಿರತೆಯ ಹಿಂಭಾಗದಲ್ಲಿ ಎತ್ತರವಾದ ದಟ್ಟವಾಗಿ ಬೆಳೆದ ಮರಗಳು ಅದರಾಚೆ ಬಟ್ಟ ಬಯಲು. ಚಿರತೆಯು ಸ್ಪಷ್ಟವಾಗಿ ಕಾಣುವಂತೆ ವರ್ಣ ಸಂಯೋಜನೆಯಲ್ಲಿ ಸೂಫಿ ತಮ್ಮ ಚಮತ್ಕಾರವನ್ನು ತೋರಿಸಿದ್ದಾರೆ. ಬಾಗಿದ ಚಿರತೆಯ ಕತ್ತು, ಸೆಟೆದ ಕಿವಿ, ಚಾಚಿದ ಬಾಲ, ಇದರ ಹೊಟ್ಟೆಯ ಭಾಗದಲ್ಲಿ ಬಿಳಿ ಕೂದಲು ಆವರಿಸಿಕೊಂಡು ತಕ್ಷಣ ಚಿರತೆಯೆಂದು ಗುರುತಿಸಬಹುದು. ಚಿರತೆಯ ಮುಂಗಾಲುಗಳ ಹಿಡಿತಕ್ಕೆ ನವಿಲು ತನ್ನ ಗರಿಗಳನ್ನು ಚೆಲ್ಲಿದೆ. ಚಿರತೆಯ ಕಣ್ಣಿನ ದೃಷ್ಟಿ ನವಿಲಿನಲ್ಲಿ ನಾಟಿದೆ. ಚಿರತೆಯ ಬಿಳಿ ಮೀಸೆ ಸೆಟೆದಿದೆ. ಮರಗಳ ಸಂದಿನಿಂದ ಕಾಣುವ ನೀಲಿ ಆಕಾಶ, ಪ್ರಶಾಂತತೆ ಭೀತಿಯನ್ನು ಉಂಟು ಮಾಡುತ್ತ ಮನೋಹರವಾಗಿ ಚಿತ್ರಿತವಾಗಿವೆ.

**ಕರಡಿಗಳು:** ಮೂರು ಬಿಳಿ ಕರಡಿಗಳು ಇವು ಶೀತ ವಲಯದಲ್ಲಿ ವಾಸಿಸುವ ಹಿಮಾಲಯ ಪರ್ವತದ ತಪ್ಪಲಿನ ಕೆಳಗೆ ವಾಸಿಸುವ ಕರಡಿಗಳಾಗಿರುತ್ತವೆ. ಹರಿಯುವ ನೀರಿನ ದಂಡೆಯಲ್ಲಿರುವ ಚಿತ್ರ, ಒಂದು ಕರಡಿ ನೀರಿಗೆ ಇಳಿದು ಮೇಲಕ್ಕೆ ದಡ ಸೇರಲು ಪ್ರಯತ್ನಿಸುತ್ತಿರುವಂತೆಯೂ ಇನ್ನೊಂದು ದಡ ಸೇರಲು ಒದ್ದಾಡುವಂತಿರುವಂತೆಯೂ ಇವುಗಳ ನಡುವೆ ಮತ್ತೊಂದು ಬಿಳಿ ಕರಡಿ ಕಲ್ಲು ಬಂಡೆಯ ಮೇಲೆ ನಿಂತುಕೊಂಡಂತೆಯೂ ಚಿತ್ರಿಸಲಾಗಿದೆ. ಕರಡಿಗಳ ಮೂತಿ ನೀಲಿ ಮಿಶ್ರ ಕಂದು ವರ್ಣದಲ್ಲಿ ಉಳಿದ ಭಾಗ ಬಿಳಿ ಕೂದಲಿನಿಂದಲೂ ಕೂಡಿದ್ದು ಸೂರ್ಯನ ಎಳೆ ಬೆಳಕು ಮುಖದ ಮೈಮೇಲೆಲ್ಲಾ ಚೆಲ್ಲಿದೆ. ಚಿತ್ರಗಳಲ್ಲಿ ನೆರಳು ಬೆಳಕನ್ನು ನೋಡುಗರ ಮನಸ್ಸನ್ನು ಸೂರೆಗೊಳಿಸುವಲ್ಲೂ ಸೂಫಿಯವರ ಕುಂಚ ಸಾರ್ಥಕತೆ ಪಡೆದಿದೆ. ಅವರ ಕಲಾಸಿದ್ಧಿ ಎದ್ದು ಕಾಣುತ್ತದೆ. ಕರಡಿಗಳ ಪ್ರತಿಬಿಂಬ ನೀರಿನ ಚಲನವಲನಗಳನ್ನು ಸೊಗಸಾಗಿ ವ್ಯಕ್ತಪಡಿಸಿದ್ದಾರೆ. ಹಿಂಬದಿ ನೀಲ ವರ್ಣದಲ್ಲಿ ಚಲಿಸುವ ಬೆಳ್ಳಿಮೋಡಗಳ ಪ್ರತಿಬಿಂಬದಿಂದ ಕರಡಿಗಳು ಎದ್ದು ಕಾಣುವಂತೆ ತೋರಿಸುತ್ತದೆ. ಕರಡಿಗಳ ಬಿಳಿ ಕೂದಲುಗಳನ್ನು ಸ್ವಾಭಾವಿಕತೆಯಿಂದ ಚಿತ್ರಿಸಲಾಗಿದೆ. ಸೂಫಿಯವರು ತೈಲವರ್ಣ ಮಾಧ್ಯಮದಲ್ಲಿಯೂ ಸಿದ್ಧಹಸ್ತರು ಎಂಬುದಕ್ಕೆ ಈ ಕೃತಿಯ ಚಿತ್ರಗಳೇ ಸಾಕ್ಷಿಯಾಗಿದೆ.

**ಹೆಬ್ಬಾವನ್ನು ಕೆಣಕುವ ಹೆಣ್ಣು ಸಿಂಹ:** ದಿಬ್ಬದ ಮೇಲೆ ಸುರುಳಿ ಬಿಚ್ಚಿದ ಹೆಬ್ಬಾವು ಸಿಂಹದ ಘರ್ಜನೆಯಿಂದ ಹೆದರಿದರೂ ತನ್ನ ಬುಸುಗುಟ್ಟುವಿಕೆಯಿಂದ ಪ್ರತಿಕ್ರಿಯೆ ತೋರಿಸುತ್ತಿರುವ ಭಯಾನಕ ದೃಶ್ಯ. ಮುಂಗಾಲು ಚಾಚಿ ಸೆಟೆದು ತಲೆ ಎತ್ತಿದ ಹೆಣ್ಣು ಸಿಂಹ ಹೆಬ್ಬಾವನ್ನು ಕೆಣಕುತ್ತಿರುವ ನೋಟ ಅಪರೂಪವಾದುದು. ಬಿಳಿ ಮೀಸೆ ಹೊಂದಿರುವಂತೆ ಕೇಸರಿ ಬಣ್ಣದ ಈ ಹೆಣ್ಣು ಸಿಂಹ ಆಕ್ರೋಶಕ್ಕೆ ಒಳಗಾದ ಅರೆಗಣ್ಣುಗಳು ತೆರೆದ ಬಾಯಿ, ಕೋರೆಹಲ್ಲುಗಳು ಆರ್ಭಟಿಸುವ ನಿಲುವು ಎಲ್ಲವೂ ಸಹಜವಾಗಿ ಮೂಡಿಬಂದಿವೆ. ಹಳದಿ ಮಿಶ್ರಿತ ನೇರಳೆ ವರ್ಣದ ಹೆಬ್ಬಂಡೆ ಅದರ ಹಿಂಬದಿ ಎತ್ತರವಾಗಿದ್ದು ಬೆಳೆದ ಗಿಡ ಮರಗಳು, ಮುಂದೆ ತಿಳಿ ಹಸಿರು ಮಿಶ್ರಿತ ನೀಲಿ ಆಕಾಶ, ಚಲಿಸುವ ಬಿಳಿ ಮಿಶ್ರ ಬೂದು ವರ್ಣದ ಮೋಡಗಳು, ನೇರಳೆ ವರ್ಣದ ಬಂಡೆಗಲ್ಲಿನ ಸಂದಿನಿಂದ ತೂರಿಬಂದ ಗಿಡದ ಕೊಂಬೆ ಇವುಗಳ ಮುಂದೆ ಬೆಟ್ಟದ ಸಾಲು, ಎಲ್ಲವೂ

ಸಹಜತೆಯಿಂದ ಕೂಡಿದೆ. ಪ್ರಶಾಂತ ವಾತಾವರಣದಲ್ಲಿ ಬೇಟೆಗಾಗಿ ಕಾದು ಕುಳಿತ ಸಿಂಹದ ಈ ಚಿತ್ರ ಬಹು ಸುಂದರವಾಗಿ ಚಿತ್ರಿತವಾಗಿದೆ.

ಇದೇ ರೀತಿ ಇನ್ನೊಂದು ಚಿತ್ರ **ಮಲಗಿರುವ ಸಿಂಹ, ಆಹಾರ ಹುಡುಕುವ ಸಿಂಹ**. ಈ ಸಿಂಹವೂ ಕೂಡ ಮುಂದಾಗಲು ಚಾಚಿ, ಅರೆ ಬಾಯಿ ತೆರೆದು ಬೇಟೆಗೆ ಹೊಂಚು ಹಾಕಿ ಮಲಗಿರುವ ಸಿಂಹ. ಹಿಂದೆ ಎತ್ತಿದ ಕುಚ್ಚಿನ ಬಾಲ, ತಿಳಿ ಹಳದಿ ವರ್ಣದ ಮೈಬಣ್ಣ ತಲೆಯ ಕತ್ತಿನಲ್ಲಿ ಬೆಳೆದ ನೀಳವಾದ ಕೇಸರಿ ಕೂದಲು, ಹಿಂದಿ ಬೆಳೆದ ಬಿದಿರಿನ ಪೊದೆ, ದಟ್ಟ ಬಯಲು ಸ್ವಚ್ಛ ದಿಗಂತದಲ್ಲಿ ಸಾಗುವ ಬೆಳ್ಳಮೋಡಗಳು ಎಲ್ಲವೂ ಸಿಂಹದ ಚಿತ್ರಕ್ಕೆ ಕಳೆ ತಂದಿವೆ. ಕಾಡಿನ ಬಯಲಿನಲ್ಲಿ ಹಸಿರು ಹುಲ್ಲುಗಾವಲಿನಲ್ಲಿ ಕುಳಿತ ಹೆಣ್ಣು ಸಿಂಹ, ಬಾಯಿ ಮುಚ್ಚಿರುವ, ಬಾಲ ಎತ್ತಿರುವ ಸೆಟೆದ ಕಿವಿಗಳು ಸಾಗಿಬರುತ್ತಿರುವ ಚಲನೆ ಈ ಕಡು ನೇರಳೆ ವರ್ಣದ ಹೆಣ್ಣು ಸಿಂಹ, ಚಲಿಸುವ ಮೋಡಗಳು, ಸಾಲು ಮರಗಳು ಎಲ್ಲವೂ ನೈಜತೆಯಿಂದ ಪ್ರತಿಬಿಂಬಿಸುತ್ತವೆ. ಹಳದಿ ಮಿಶ್ರಿತ ಹಸಿರು ಹುಲ್ಲುಗಾವಲಾದರು ಕುಂಚದ ಸೆಳೆತದಿಂದ ಸ್ಪಷ್ಟವಾಗಿ ಎದ್ದು ತೋರುತ್ತದೆ.

**ಜಿಪ್ಸಿ ಕುಕ್ಕರ್:** ಮಾದರಿಯಲ್ಲಿ ಅಡಿಗೆ ಕೋಣೆಯಲ್ಲಿ ಹೆಂಗಸೊಬ್ಬಳು ಒಲೆಯ ಮುಂದೆ ಕುಳಿತು ಅನ್ನ ಬೇಯಿಸುವ ದೃಶ್ಯ. ಇಲ್ಲಿ ದಟ್ಟವಾದ ಹೊಗೆ ಒಲೆಯಿಂದ ಬರುವ ಬೆಂಕಿಯ ಬೆಳಕಿನ ಪ್ರಖರತೆ ಹೆಂಗಸಿನ ಮುಖದ ಮೇಲೆ ಬಿದ್ದಿರುವ ಬೆಳಕು ಎಲ್ಲವೂ ಸಹಜವಾಗಿ ಚಿತ್ರಿತವಾಗಿದೆ. ಸಂಯೋಜನಾ ಚಿತ್ರದಲ್ಲೂ ಸೂಫಿಯವರು ಉತ್ತಮ ಸಾಧನೆಗೆ ಈ ಚಿತ್ರ ನಿದರ್ಶನವಾಗಿದೆ. ತಾವು ಬೆಳೆದು ಬಂದ ಪರಿಸರ ಇಲ್ಲಿ ಸಹಜವಾಗಿ ಚಿತ್ರಿತವಾಗಿರುವುದನ್ನು ಗಮನಿಸಬಹುದಾಗಿದೆ.

ಇದೇ ರೀತಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಸ್ತು ಸಂಗ್ರಹಾಲಯಕ್ಕೆ ಸೂಫಿಯವರ ಎರಡು ವನ್ಯಜೀವಿಗಳ ಚಿತ್ರಗಳನ್ನು ಸಂಗ್ರಹಿಸಿಕೊಟ್ಟಿದ್ದೇನೆ. 'ಸುಧಾ'ದಲ್ಲಿ ಪ್ರಕಟವಾದ ಹುಲಿಯ ಚಿತ್ರ ಮತ್ತೊಂದು ಜಿಂಕೆಯನ್ನು ಹಿಡಿದು ಕುಳಿತಿರುವ ಮೈಸೂರಿನ ಗಣ್ಯರೊಬ್ಬರ ಮನೆಯಲ್ಲಿದೆ. ಇವಲ್ಲದೆ ನೂರಾರು ಚಿತ್ರಗಳು ಕರ್ನಾಟಕದ ಒಳಗೂ ಹೊರಗೂ ಕಲಾಸಕ್ತರ ಮನೆಯ ಭಿತ್ತಿಗಳಲ್ಲಿ ರಾರಾಜಿಸುತ್ತಿವೆ.

ಒಟ್ಟಾರೆ ಸೂಫಿಯವರ ಹೃದಯವೂ ವೀರರಸದಿಂದ ಸಂಪೂರ್ಣವಾಗಿದ್ದಿ ತೆಂಬುದಕ್ಕೂ ಅವರು ರಚಿಸಿರುವ ಬಹುಪಾಲು ವನ್ಯಜೀವಿಗಳ ಬೇಟೆಯ ಚಿತ್ರಗಳು ಸಾಕ್ಷಿಯಾಗಿವೆ. ಸೌಂದರ್ಯದಲ್ಲಿ ಭೀತಿಯೂ ಸಮ್ಮಿಳನಗೊಂಡು ರೌದ್ರಾಯುಕ್ತವಾದ ಚಿತ್ರ ರಚನೆಯಲ್ಲೂ ಸೂಫಿಯವರು ಸಿದ್ಧ ಹಸ್ತರೆನಿಸಿ ತಮ್ಮ ಎಲ್ಲ ಕಲಾ ಮಜಲಿನಲ್ಲೂ ಅಭಿವ್ಯಕ್ತಿಸಿದ್ದಾರೆ.

ಸೂಫಿಯವರು ಹೆಚ್ಚು ಶ್ರದ್ಧೆ ವಹಿಸಿದ್ದು ಪ್ರಾಣಿಗಳ ಚಿತ್ರದಲ್ಲಿ. ಅದರಲ್ಲಿ ಸಿದ್ಧಹಸ್ತರಾದ ಕಲಾವಿದರೆಂಬ ಕೀರ್ತಿ ಗಳಿಸಿದ್ದರು. ಅವರು ಆಧುನಿಕ ರೀತಿಯನ್ನು ಬಯಸುವವರಾಗಿದ್ದರು. ಮೂಢನಂಬಿಕೆಗಳನ್ನಾಗಲೀ ಹಳೆಯ ಸಂಪ್ರದಾಯಗಳನ್ನಾಗಲೀ ಅಷ್ಟಾಗಿ ನಂಬುತ್ತಿರಲಿಲ್ಲ. ಪ್ರಕೃತಿಯ ಯಥಾವತ್ತಾಗಿ ಕಾಣುವ ವಸ್ತುವನ್ನು ಅಭ್ಯಾಸ ಬಲದಿಂದ ನಂಬುವವರಾಗಿದ್ದರು.



ಅವರಿಗೆ ದುಃಖ, ಸುಖ, ಸತ್ಯ ಸೌಂದರ್ಯ ಜೀವನದ ಘಟನೆಗಳನ್ನು ಕಂಡರೆ ಪಂಚಪ್ರಾಣ. ಈ ಸನ್ನಿವೇಶಗಳನ್ನು ಚಿತ್ರಿಸಲು ಅವರ ಮನಸ್ಸು ಕಾತುರಪಡುತ್ತಿತ್ತು.

ಅವರ ಚಿತ್ರಗಳು ಕನ್ನಡ ನಾಡಿಗೆ ಅಪಾರ ಗೌರವ ತಂದಿವೆ. ಅವುಗಳು ಸುಸ್ಪಷ್ಟವಾಗಿ, ಹೃದಯಂಗಮಗಾಗಿ ಕಲಾಪೂರ್ಣವಾಗಿ ಪ್ರಜ್ವಲಿಸುವ ಚಾಕಚಕ್ಯತೆಯಿಂದ ಕಂಡು ಬರುತ್ತವೆ. ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಅವರ ಕಾಲ ಕೃತಿಗಳು ಅನೇಕ ಸಾರಿ ಬಹುಮಾನ ಗಳಿಸಿವೆ. ಅಷ್ಟೇ ಅಲ್ಲಾ ಆ ಕೃತಿಗಳು ಕ್ಷಣ ಮಾತ್ರದಲ್ಲಿ ವಿಕ್ರಯವಾಗಿರುವುದೇ ಅವರ ಕಾಲ ಪ್ರತಿಭೆಗೆ ಸಾಕ್ಷಿಯಾಗಿದೆ. ಸರ್ಕಾರ ಕೆಲವನ್ನು ಕೊಂಡಿದೆ. ಕರ್ನಾಟಕ ಲಲಿತಕಲಾ ಅಕಾಡೆಮಿ ಅವರ ಕೃತಿಗಳನ್ನು ಪ್ರದರ್ಶಿಸಿದುದಲ್ಲದೆ ಕೆಲವನ್ನು ಸಂಗ್ರಹಿಸಿದೆ. ಮೈಸೂರಿನ ಜಗನ್‌ಮೋಹನ ಕಲಾಶಾಲೆ ಇವರ ಚಿತ್ರಗಳನ್ನು ಕೊಂಡು ಪ್ರದರ್ಶಿಸಿದೆ. ಗಂಗೋತ್ರಿಯ ಜಾನಪದ ವಸ್ತು ಸಂಗ್ರಹಾಲಯದ ಚಿತ್ರಕಲಾ ಗ್ಯಾಲರಿಗೆ ಸೂಫಿಯವರ ಎರಡು ಕೃತಿಗಳನ್ನು ದಾನವಾಗಿ ನೀಡಿದ್ದು. ಪ್ರದರ್ಶಿತವಾಗಿದೆ. ಅನೇಕ ಚಿತ್ರಗಳು ಅವರ ಅಭಿಮಾನಿಗಳಲ್ಲಿ ಸಂಗ್ರಹಿತವಾಗಿದೆ.

ಸೂಫಿಯವರು, ಕರ್ನಾಟಕದ ಕಲಾಕ್ಷೇತ್ರದಲ್ಲಿ ಹೊಂಬೆಳಕನ್ನು ಬೀರಿದರು. ನವೀನ ರೀತಿಯಲ್ಲಿ ಹಾದಿಯನ್ನು ಹಸನು ಮಾಡಿದರು. ಕಲೆಯ ಹೆಸರಿನಲ್ಲಿ ಹಣದ ಸುಲಿಗೆ ಅವರಿಗೆ ಸಲ್ಲದ್ದಾಯಿತು. ಬಡತನದ ಬೇಗೆಯಲ್ಲಿ ಬೆಂದರು. ಹಣದ ಆಸೆಗೆ ಕಲೆಯನ್ನು ಕೈ ಬಿಡಲಿಲ್ಲ. ಮುಂದುವರಿಸಿಕೊಂಡು ಬಂದಿದ್ದರು. ಜನರ ಒಣ ಹೊಗಳಿಕೆಯಿಂದ ಬರುವ ಪ್ರತಿಷ್ಠೆಗೆ ಮನ ಕೊಡಲಿಲ್ಲ. ಶಾಂತ ಸ್ವಭಾವದ ಅವರು ತಮಗೆ ಬರುತ್ತಿದ್ದ ಅಲ್ಪ ವೇತನದಲ್ಲಿ ತೃಪ್ತಿ ಜೀವನ ನಡೆಸುವ ಛಲಗಾರರಾಗಿದ್ದರು. ಬಡತನವನ್ನು ಬೆನ್ನಟ್ಟಿ ಬಂದರು. ಧರ್ಮದ ದೃಷ್ಟಿಯಿಂದ ದೂರ ಸರಿದವರಾಗಿಲಿಲ್ಲ. ಒಣ ಪ್ರತಿಷ್ಠೆಗೆ ಬೆಲೆಕೊಡದ ಸೂಫಿ ನೀತಿಯಲ್ಲಿ ಯತಿಯಂತಿದ್ದರು. ಅವರಿಗೆ ಆಗದವರನ್ನು ಮಿತ್ರರನ್ನಾಗಿ ಮಾಡಿಕೊಳ್ಳುವ ಗುಣ ಅವರದಾಗಿತ್ತು. ಸದಾ ಹಸನ್ಮುಖಿಗಳಾಗಿ ಸೌಮ್ಯ ರೀತಿಯ ಆಡಂಬರವಿಲ್ಲದ ಸ್ವಚ್ಛ, ಸರಳ ಉಡಿಗೆ ತೊಡಿಗೆಯ ಬದುಕು ಅವರದಾಗಿತ್ತು.

"ಇಂತಹ ಒಳ್ಳೆಯ ಸದ್ಗುಣ ಶೀಲ ಮುಸ್ಲಿಂ ಕಲಾಧ್ಯಾಪಕ ಮಿತ್ರ ಸಿಗುವುದು ಬಹಳ ಅಪರೂಪ" ಎಂದು ಅವರ ಸಹೋದ್ಯೋಗಿಗಳಾಗಿದ್ದ ದಿ.ವೈ. ಸುಬ್ರಹ್ಮಣ್ಯ ರಾಜು ಅವರು ಹೇಳುವ ಅಭಿಮಾನದ ಮಾತು ಯಾರೇ ಆದರೂ ಒಪ್ಪಲೇಬೇಕು.

ಸೂಫಿಯವರ ಜೊತೆ ಕೆಲಸ ಮಾಡಿದ ಖ್ಯಾತ ಕಲಾವಿದ **ಎಂ.ಜೆ. ಶುದ್ಧೋದನರು** (೧೪-೧೨-೯೭ರಲ್ಲಿ) ಹೀಗೆ - ಬರೆದಿದ್ದಾರೆ: "F. M. Soophie, I first met him when I jointed C.T.I. in 1931. After I was admitted to the 3rd year, Soophie was in 4th year. Late N. Hanumaiah, Abdul Ajeez S/o. Late Ajeez Mohammed Mysore Palace Artist who was very good at animal paintings. After sometime he went to Kabul as Principal, Kabul School of Arts by seeing his works, Soophie got interest in painting animals. So Soophie used to visit Mysore zoo after and practiced sketching wild animals and many paintings.

After his fine Arts course in C.T.I. he joined J.J. School of Art of Bombay, with late Souquath Alli, who became a master craftsman - in Inlay work. Soophie jointed C.T.I. as Art instructor. His colleagues were Y.S. Raju, S. Nanjunda Swamy and Rajashekaraiah.

During my period as vice principal (Arts) I observed Soophie as a dedicated teacher. He used to treat his students as his friends, and was very special for his simple living and good native he was loved by one and all."

ಸೂಫಿಯವರನ್ನು ಸಮೀಪದಿಂದ ಬಲ್ಲ ಮತ್ತೊಬ್ಬ ಹಿರಿಯ ಕಲಾವಿದ ದಿ. ರೂಮಾಲೇ ಚೆನ್ನ ಬಸವಯ್ಯನವರು ನನಗೆ ಬರೆದ ಪತ್ರದಲ್ಲಿ "ಸೂಫಿ ಸಾಹೇಬರ ಪತ್ರ ತಲುಪಿದೆ. ಅವರ ಚಿತ್ರಗಳು ಉತ್ತಮ ಸ್ಥಳ ಸೇರಲು ಪ್ರಯತ್ನಿಸುತ್ತಿವೆ. ಅವರು ಹಾಕಿರುವ ಹಣ ತೀರಾ ಕಡಿಮೆ ಸರಿಯಾದ ಬೆಲೆಗೆ ಬಿಕರಿ ಮಾಡಲು ಯತ್ನಿಸುವೆ. ಅವರಿಗೆ ಹೆಚ್ಚಿನ ಹಣ ದೊರಕುವಂತಾದರೂ ನನ್ನಭಾಗದ ಸೇವೆ ಮಾಡಿದಂತಾಗುವುದು. ವಾಸ್ತವವಾಗಿ ಸೂಫಿಯವರಿಗೆ ಸರ್ಕಾರದ ಗೌರವ ಸಂಭಾವನೆ ಸಲ್ಲಲೇಬೇಕು. ನೀವು ಅತ್ತ ಕಡೆಯಿಂದ ಪ್ರಯತ್ನಿಸಿ" ಎಂದು ನನ್ನನ್ನು ಕಾರ್ಯಶೀಲರನ್ನಾಗಿ ಮಾಡಿದ್ದರು. ರುಮಾಲೇ ಅವರ ಈ ಸೂಚನೆ ನೆರವೇರುವಂತೆ ಮಾಡಿದ್ದು ನನ್ನ ಸೇವೆ ಭಾವಿಸುವೆ.

ಸೂಫಿಯವರ ಅಭಿಮಾನಿ ಕಲಾವಿದರು ಚಾಮರಾಜೇಂದ್ರ ದೃಶ್ಯ ಕಲಾ ಅಕಾಡೆಮಿಯ ನಿವೃತ್ತ ಡೀನ್ ಅವರಾದ **ಪ್ರೊ. ವಿ.ಎಸ್. ಸೋಲಾಪುರ್‌ಕರ್** ಹೀಗೆ ಹೇಳುತ್ತಾ "ನಾನು ಕಾವಾದ ಪ್ರಥಮ ಡೀನಾಗಿ ಮೈಸೂರಿಗೆ ಬಂದಾಗ ನನ್ನ ಕಛೇರಿಗೆ ಬರುತ್ತಿದ್ದವರಲ್ಲಿ ಸೂಫಿ, ಎಸ್.ಎನ್. ಸ್ವಾಮಿ, ಪಿ.ಆರ್. ತಿಪ್ಪೇಸ್ವಾಮಿ, ಗುರು, ಇವರು ಪ್ರಮುಖರಾಗಿದ್ದು ನೆನಪಾಗುತ್ತದೆ"

ಸೂಫಿಯವರು ಅತಿ ಆತ್ಮೀಯರಾಗಿದ್ದರೂ, ನೂತನ ಕಲಾ ಶಾಲೆ ಕೆಲಸಗಳ ಬಗ್ಗೆ ಮೆಚ್ಚುಗೆ ಸೂಚಿಸಿದ್ದರು. ಬೊಂಬಾಯಿ ಜೆ.ಜೆ. ಕಲಾಶಾಲೆಯಲ್ಲಿ ಕಲಿತ ಸೂಫಿಯವರಿಗೆ ನನ್ನನ್ನು ಕಂಡರೆ ಅಭಿಮಾನ ಕಾರಣ ನಾನು ಅದೇ ಶಾಲೆಯಿಂದ ಬಂದವನೆಂದೂ.

ಸೂಫಿಯವರು ಮೇಲಿಂದ ಮೇಲೆ ಬರುತ್ತಿದ್ದರಲ್ಲದೇ ಒಮ್ಮೆ ತಾವು ರಚಿಸಿದ ಪ್ರಾಣಿ ಪಕ್ಷಿಗಳ ಪೆನ್ಸಿಲ್ ಚಿತ್ರಗಳ ಡ್ರಾಯಿಂಗ್ ಪುಸ್ತಕವನ್ನು ತೋರಿಸಿದ್ದರು. ಗ್ರಂಥ ರೂಪದಲ್ಲಿ ತರಲು ಸರ್ಕಾರದೊಡನೆ ಪ್ರಯತ್ನಿಸಿದೆವು. ಸರ್ಕಾರದೊಡನೆ, ಆದರೆ ಅದು ಕೈ ಗೂಡಲಿಲ್ಲ. ಅದು ಹೊರ ಬಂದಿದ್ದರೆ ಕಾಲ ಜಗತ್ತಿಗೆ ಸೂಫಿಯವರ ಒಳ್ಳೆಯ ಕಾಣಿಕೆಯಾಗುತ್ತಿತ್ತು ಎಂದು ನನ್ನ ಭಾವನೆ.

ಸೂಫಿಯವರು ಪಶು ಪಕ್ಷಿಗಳನ್ನು ಉತ್ತಮ ರೀತಿಯಲ್ಲಿ ಅಭ್ಯಾಸ ಮಾಡಿ ರೇಖೆಗಳಲ್ಲಿ ಸಾಧಿಸಿದ ಸಾಧನೆ ಬಹು ದೊಡ್ಡದು. ಇದು ಭಾರತದ ಕಲಾಜಗತ್ತಿನಲ್ಲೆ ವಿರಳ. ಸೂಫಿಯವರು ಸ್ವಭಾವದಿಂದ ಅಂಜುಬುರುಕರಾಗಿದ್ದರು. ತಮ್ಮ ಕೆಲಸ ಸಾಧನೆ ಸೀಮಿತಗೊಳಿಸಿದ್ದರು ಎನಿಸುತ್ತದೆ. ತಮ್ಮ ಕಲಾಶಕ್ತಿ ಅವರಿಗೆ ತಿಳಿದಿರಲಿಲ್ಲ. ಪ್ರೋತ್ಸಾಹಿಸುವವರನ್ನು ಬೆನ್ನು ಹತ್ತುವ ಕೆಲಸ ಮಾಡಲಿಲ್ಲ. ಹೀಗಾಗಿ ಸೂಫಿಯವರ

ಅಪ್ರತಿಮವಾದ ಪೆನ್ಸಿಲ್ ರೇಖಾ ಚಿತ್ರಗಳು ಮುಂದಿನ ಕಲಾಭ್ಯಾಸಿಗಳಿಗೆ ದೊರಕುವುದು ಕನಸಿನ ಮಾತಾಗಿದೆ. ಹೊರಬಂದರೆ ಪಶು ಪಕ್ಷಿಗಳ ಅನಾಟಮಿ ಚಿತ್ರಣ ತಿಳಿಯಬಯಸುವವರಿಗೆ ಉತ್ತಮ ಕೊಡುಗೆಯಾಗುತ್ತದೆ ಎಂದಿದ್ದಾರೆ.

ಈ ಕೃತಿ ಬಗ್ಗೆ ಸೂಫಿಯವರು ನಿಧನರಾದ ಮೇಲೂ ಅವರ ಪುತ್ರ ನನಗೆ ಪತ್ರ ಬರೆದು ವಿನಂತಿಸಿಕೊಂಡಿದ್ದಾರೆ. ಹೆಚ್ಚು ಹಣ ಈ ಕೃತಿ ಪ್ರಕಟಣೆಗೆ ಅಗತ್ಯವಿರುವುದರಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇತ್ತ ಗಮನಹರಿಸುವಂತೆ ಮಾಡಬೇಕಾಗಿದೆ.

ಸೂಫಿಯವರ ಸಂಗಾತಿಯಾಗಿದ್ದ ಇನ್ನೊಬ್ಬ ಶಿಲ್ಪಿ ಸಿ. ಸಿದ್ಧಲಿಂಗಯ್ಯನವರನ್ನು ಸಮೀಪದಿಂದ ಬಲ್ಲವರು. ಇಬ್ಬರೂ ಒಂದೇ ಕಲಾಶಾಲೆಯಲ್ಲಿ ಕೆಲಸ ಮಾಡಿದವರು. ಒಟ್ಟೊಟ್ಟಿಗೆ ದಿನನಿತ್ಯ ಓಡಾಡಿದವರು. ಸುಖ ದುಃಖವನ್ನು ತೋಡಿಕೊಂಡವರು. ಅದೆಷ್ಟೋಸಾರಿ ಸಿದ್ಧಲಿಂಗಯ್ಯನವರಿಗೆ ಬಂದ ಅಡ್ಡಿ ಆತಂಕಗಳನ್ನು ನಿಭಾಯಿಸಲು ಧೈರ್ಯ ತುಂಬಿದರು. "ಸಾಧು ಸ್ವಭಾವದ ಸೂಫಿಯವರಂತಹ ಶರಣರು ನನ್ನ ಜೀವನದಲ್ಲಿ ದೊರೆತದ್ದು ನನ್ನ ಭಾಗ್ಯ" ಎನ್ನುತ್ತಾರೆ ಈ ಶಿಲ್ಪಿಗಳು.

ಈ ಕೃತಿ ಹೊರಬರಲು ಸೂಫಿಯವರ ಕೆಲವು ರೇಖಾಚಿತ್ರಗಳು ನನಗೆ ಬೇಕಾಯಿತು. ಸೂಫಿಯವರ ಮಕ್ಕಳನ್ನು ಅನೇಕ ಸಾರಿ ಸಂಪರ್ಕಿಸಿದೆ. ಅವರಿಗೆ ಅವರ ಆಪ್ತರಿಂದಲೂ ಹೇಳಿಸಿ ನೋಡಿದೆ. ನನ್ನ ಆಸೆ ಕೈಗೂಡಲಿಲ್ಲ. ಸೂಫಿಯವರ ಆತ್ಮೀಯರೊಬ್ಬರ ಫೋನಿನ ನಂಬರ್ ದೊರಕಿತ್ತು. ಅವರನ್ನು ಸಂಪರ್ಕಿಸಿದೆ. "ಸೂಫಿ ಶಿಷ್ಯ ತಿಪ್ಪೇಸ್ವಾಮಿ ಎಂದೆ".

ಆ ವ್ಯಕ್ತಿ ಮಾತಾನಾಡಿದ್ದು "ನಾನು ಅಕಸ್ಮಾತ್ ಸೂಫಿ ದೋಸ್ತ್. ನಿಮ್ಮ ಹೆಸರು ಸೂಫಿ ಹೇಳಿದ್ದು ಕೇಳಿದ್ದೆ. ನಿಮ್ಮ ಮುಖ ನೋಡಿಲ್ಲಾ. ನಾನೇ ಸೂಫಿ ಮಗನಿಗೆ ಹೆಣ್ಣು ಕೊಡಿಸಿದ್ದು. ದೇವರಂತಹ ಮನುಷ್ಯ ಸೂಫಿ. ಅವರಂತಹ ಮನುಷ್ಯರು ಈ ಪ್ರಪಂಚದಲ್ಲಿ ಮತ್ತೆ ಹುಟ್ಟೋಕ್ಕಿಲ್ಲಾ, ನನ್ನದು ಗುಜರಿಯಲ್ಲಿ ವರ್ಕ್‌ಶಾಪ್ ಇದೆ. ಅಲ್ಲೊಬ್ಬರು ಸ್ವಾಮಿ (ಎಸ್.ಎನ್. ಸ್ವಾಮಿ) ಅಂತ ಸೂಫಿ ಗೆಳೆಯ ಇದ್ರು, ಫೋಟೋ ಬರೀತಿದ್ರು, ಅವರು ಸೂಫಿ ಅವರನ್ನ, ಅವರ ಚಿತ್ರಗಳನ್ನು ತುಂಬಾ ತಾರೀಪು ಮಾಡ್ತಿದ್ರು, ಇಂತಹವರು ಸಿಗೊಲ್ಲಾ ಸ್ವಾಮಿಗಳೇ ಅದನ್ನ ಕಂಡೆ ನಾನು ಸೂಫಿ ಮಗನಿಗೆ ನಮ್ಮ ಕಡೆ ಹೆಣ್ಣು ಕೊಡಿಸಿ ಮದುವೆ ಮಾಡಿಸಿದ್ದೆ" ಎಂದರು. ಅಸ್ಮತ್ ಸಾಹೇಬರು ಸೂಫಿ ಅವರ ಬಂಧುಗಳಾಗಿ ಇದ್ದವರು. ಇವರ ಮೂಲಕ ರೇಖಾ ಚಿತ್ರಗಳ, ಛಾಯಾಚಿತ್ರಗಳನ್ನು ಸೂಫಿ ಬಳಗದವರಿಂದ ಸಂಗ್ರಹಿಸಲು ಪ್ರಯತ್ನಿಸಿದೆ. ಆದರೆ ಬರೀ ಅವರ ಮನೆಗಳ ದಾರಿ ಸವೆಸಿದ ಶ್ರಮವೇ ವಿನಹ ನನ್ನ ಆಸೆ ಫಲಿಸಲಿಲ್ಲ. ತಂದೆಗೆ ಇದರಿಂದ ಬರುವ ಕೀರ್ತಿಯ ಕಡೆ ಆಲೋಚಿಸಲಿಲ್ಲವಲ್ಲ ಎಂಬ ನೋವು ನನಗೆ ಕಾಡುತ್ತಿತ್ತು. ಕೊನೆಗೆ ಅವರ ಪುತ್ರ ನೂರ್ ಅಹಮ್ಮದ್ ಆ ಆಸೆಯನ್ನು ಪೂರೈಸಲು ಕೆಲವು ರೇಖಾಚಿತ್ರಗಳ ಛಾಯಾಚಿತ್ರ ತೆಗೆದುಕೊಳ್ಳಲು ಸಹಕರಿಸಿದ್ದು ಸಂತೋಷ ತರಿಸಿತು. ಛಾಯಾಚಿತ್ರಕಾರ ಎಸ್. ತಿಪ್ಪೇಸ್ವಾಮಿ ಅವರ ಸಹಕಾರ ಮೆಚ್ಚುವಂತಹುದು.

ನಾನು ಧರ್ಮಸ್ಥಳದ **"ಮಂಜುಶಾ"** ವಸ್ತು ಸಂಗ್ರಹಾಲಯದ ಕೆಲಸದಲ್ಲಿ ತೊಡಗಿದ್ದ ದಿನಗಳು ಏಕೋ ಮೈಸೂರಿಗೆ ಬಂದಿದ್ದೆ. ಜೂನ್ ೪, ೧೯೮೮ರ ಸಂಜೆ ಮೈಸೂರಿನ

ಪತ್ರಿಕಾಲಯ ಬಳಿ ಮಿತ್ರರೊಬ್ಬರು 'ಸೂಫಿ ಉಳಿಯುವಂತಿಲ್ಲಾ' ಎಂದರು. ತಕ್ಷಣ ಕಲಾವಿದ ಗುರು ಜೊತೆ ಖಾಸಗಿ ಆಸ್ಪತ್ರೆಗೆ ಧಾವಿಸಿದೆ. ಮಂಚದ ಮೇಲೆ ಸೂಫಿ ಕುಳಿತಿದ್ದರು. ಲವಲವಿಕೆಯಿಂದ ಇದ್ದುದ್ದನ್ನು ಕಂಡು ನಾವು ಸಮಾಧಾನಗೊಂಡೆವು. ಅಲ್ಲಿ ಅವರನ್ನು ನೋಡಿಕೊಳ್ಳುತ್ತಿದ್ದ ನನ್ನ ಮಿತ್ರರಾದ ಡಾ: ಎಂ.ವಿ. ಗೋವಿಂದಪ್ಪನವರಿಗೆ ಸೂಫಿಯವರನ್ನು ಪರಿಚಯಿಸಿ ಕೊಡುತ್ತಾ 'ಇವರು ಕರ್ನಾಟಕದ ದೊಡ್ಡ ಕಲಾವಿದರು, ನಮ್ಮ ಗುರುಗಳು ಕೂಡ. ಚೆನ್ನಾಗಿ ನೋಡಿಕೊಳ್ಳಿ' ಎಂದು ವಿನಂತಿಸಿ ಹೊರಬಂದೆವು.

ಧರ್ಮಸ್ಥಳದಲ್ಲಿದ್ದ ನನಗೆ ಜೂನ್ ೧೫ರ ಸಂಜೆ ಮೈಸೂರಿನಿಂದ ಕಲಾವಿದ ಮಿತ್ರ ರಾಜಶೇಖರ ಕದಂಬ ಅವರಿಂದ ದೂರವಾಣಿ ಕರೆ ಬಂತು. ಸೂಫಿ ಅವರ ನಿಧನದ ವಾರ್ತೆ ನಗೆ ಆಘಾತ ತಂದಿತ್ತು. "ಧರ್ಮಸ್ಥಳಕ್ಕೆ ಬರುತ್ತೇನೆ. ಅಲ್ಲಿ ಕೆಲವು ನಿಸರ್ಗ ಚಿತ್ರಗಳನ್ನು ರಚಿಸುತ್ತೇನೆ. ಪೂಜ್ಯ ಹೆಗಡೆಯವರಿಗೂ ಕೊಡುತ್ತೇನೆ." ಎಂದು ತಿಳಿಸಿದ ಸೂಫಿಯವರು ಬರಲಾಗಲಿಲ್ಲವಲ್ಲ ಅವರ ಕೊನೆಯ ಆಸೆ ನೆರವೇರಲಿಲ್ಲವಲ್ಲ, ಇಲ್ಲಿಗೆ ಭಗವಂತ ಕರೆಸಲಿಲ್ಲವಲ್ಲ! ವಿಧಿ ನಿಯಮ ತಪ್ಪಾಲಾದೀತೇ!.

ಸೂಫಿಯವರು ದೈವಾಧೀನರಾದ ಮೇಲೆ ಅವರ ಪತ್ನಿ ಹಾಗೂ ಹಿರಿಯ ಮಗ ನೂರ್ ಅಹಮ್ಮದ್ ಅವರು ತಮ್ಮ ಒಡಲಾಳದ ನೋವು ನಲಿವುಗಳನ್ನು ಪತ್ರದ ಮೂಲಕ ಬರೆದು ತಿಳಿಸುವ ಸಂಪರ್ಕ ಇಲ್ಲಿಯ ತನಕ ಉಳಿದು ಬಂದಿದೆ.

ಕನ್ನಡ ನಾಡಿನ ಅಪರೂಪ ಕಲಾವಿದರಾಗಿ ೭೨ ವರ್ಷಗಳ ತುಂಬು ಸಾತ್ವಿಕ ಜೀವನ ನಡೆಸಿ (೧೩-೬-೧೯೮೮) ನಮ್ಮನ್ನಗಲಿದರು. ಅವರು ಚಿತ್ರಿಸಿದ ನೂರಾರು ಚಿತ್ರ ಕಲಾಕೃತಿಗಳು ಇಂದಿಗೂ ನಮ್ಮ ನಡುವೆ ಇದೆ. ಈ ನಿಟ್ಟಿನಲ್ಲಿ ಸೂಫಿಯವರನ್ನು ಮೀರಿಸುವಂತಹ ಕಲಾವಿದ ನಾಡಿನಲ್ಲಿ ಈವರೆಗೂ ಬರಲಿಲ್ಲ. ಹಾಗೇನಾದರೂ ಕಲಾವಿದನೊಬ್ಬ ಹುಟ್ಟಿದರೆ ಮೊಟ್ಟಮೊದಲು ಅವರ ಆತ್ಮ ಸಂತೋಷ ಪಡುತ್ತದೆ.



